

# ಶ್ರೀವಾಣಿ

ದೇವ ದೇವನ ಪ್ರಾರ್ಥನೆಗೆ ಯಾವಪರಿಕರವೂ ಬೇಕಿಲ್ಲ. ಆಡಂಬರವೂ ಬೇಕಿಲ್ಲ ಬೇಕಾಗಿರುವುದು ನೈಜಭಕ್ತಿ, ಅಚಲವಾದ ಶ್ರದ್ಧೆ, ಮತ್ತು ಪರಿಶುದ್ಧವಾದ ಮನಸ್ಸುಮಾತ್ರ. ಮುಗ್ಧ ಮನಸ್ಸಿನಿಂದ ಮಾಡಿದ ಪ್ರಾರ್ಥನೆಗೆ ದೇವನು ಒಲಿಯುತ್ತಾನೆ.

ಒಂದು ಸಣ್ಣದ್ವೀಪವಿತ್ತು. ಅದರಲ್ಲಿ ಮೂರುಮಂದಿ ಮುಗ್ಧಬಾಲಕರಿದ್ದರು. ಏನೂ ಅರಿಯದವರು. ಅವರು ಪ್ರತಿದಿನ ತಪ್ಪದೇ ಶ್ರದ್ಧೆಯಿಂದ ದೇವರನ್ನು ಕುರಿತು ಪ್ರಾರ್ಥನೆ ಮಾಡುತ್ತಿದ್ದರು. ಅವರಿಗೆ ಯಾವ ಮಂತ್ರವಾಗಲಿ, ಸ್ತೋತ್ರವಾಗಲಿ ಗೊತ್ತಿಲ್ಲ. ಅವರು ದೇವರನ್ನು ಪ್ರಾರ್ಥನೆ ಮಾಡುತ್ತಿದ್ದುದು ಇಷ್ಟೆ: "ನೀನೂ ಮೂಢ, ನಾವೂ ಮೂಢರು, ನಮ್ಮನ್ನು ಕಾಪಾಡು" ಪಕ್ಕದಲ್ಲಿ ಇನ್ನೊಂದು ದ್ವೀಪವಿತ್ತು. ಅದರಲ್ಲಿ ಒಬ್ಬ ಪಾದ್ರಿಯಿದ್ದ. ಆತನಿಗೆ ಈ ಹುಡುಗರ ವಿಚಾರ ಗೊತ್ತಾಯಿತು. ತಾನು ಹೋಗಿ ಆ ಮುಗ್ಧಹುಡುಗರಿಗೆ ಪ್ರಾರ್ಥನೆಯ ವಿಧಾನವನ್ನು ಹೇಳಿಕೊಡಬೇಕು ಎಂದುಕೊಂಡ. ಹಡಗನ್ನುಹತ್ತಿ ಆ ಹುಡುಗರಿದ್ದ ದ್ವೀಪಕ್ಕೆ ಹೋದ. ಅವರಿಗೆ ಪ್ರಾರ್ಥನೆಯ ವಿಧಾನವನ್ನ ಚೆನ್ನಾಗಿ ತಿಳಿಸಿಕೊಟ್ಟ. ಕೆಲವು ಮಂತ್ರಗಳನ್ನು ಕ್ರಮಬದ್ಧವಾಗಿ ಕಂಠಪಾಠ ಮಾಡಿಸಿದ. ಹುಡುಗರು ಅದನ್ನು ಚೆನ್ನಾಗಿ ಕಲಿತುಕೊಂಡರು. ಅದರಂತೆ ಪ್ರಾರ್ಥನೆ ಮಾಡತೊಡಗಿದರು. ಅನಂತರ ಪಾದ್ರಿ ಹಡಗನ್ನು ಹತ್ತಿ ತನ್ನ ದ್ವೀಪಕ್ಕೆ ಹೊರಟ. ವಿಶಾಲವಾದ ರುದ್ರಭವ್ಯ ಸಾಗರದಲ್ಲಿ ಹಡಗು ಮುಂದೆ ಮುಂದೆ ಸಾಗುತ್ತಿದೆ. ಆಗ ಆ ಪಾದ್ರಿ ಮುಗ್ಧಬಾಲಕರಿದ್ದ ದ್ವೀಪದಕಡೆ ಒಮ್ಮೆ ತಿರುಗಿ ನೋಡಿದ. ದೂರದಲ್ಲಿ ಒಂದು ಅಪೂರ್ವವಾದ ತೇಜೋರಾಶಿ ಕಾಣಿಸಿತು. ಅದು ಹಡಗಿನ ಕಡೆ ಬಹಳ ವೇಗವಾಗಿ ಬರುತ್ತಿತ್ತು. ಬರಬರುತ್ತಾ ಹತ್ತಿರ ಬಂತು. ನೋಡಿದ, ಆ ಮೂರು ಮಂದಿ ಮುಗ್ಧಬಾಲಕರು ಬರುತ್ತಿದ್ದಾರೆ. ನೀರಿನ ಮೇಲೆ ಯಾವ ಆಶ್ರಯವೂ ಇಲ್ಲದೆ ನಡೆದುಕೊಂಡು ಬರುತ್ತಿದ್ದಾರೆ. ತೇಜಸ್ಸು ಅಗಾಧವಾಗಿದೆ. ಅಪೂರ್ವವಾಗಿದೆ. ಬಂದ ಆ ಹುಡುಗರು ಪಾದ್ರಿಯನ್ನು ಕೇಳಿದರು: "ಸ್ವಾಮಿ, ತಾವು ಹೇಳಿಕೊಟ್ಟ ಮಂತ್ರಮರೆತುಹೋಯಿತು. ಮತ್ತೊಮ್ಮೆ ಹೇಳಿಕೊಡಿ" ಪಾದ್ರಿ ಉತ್ತರ ಕೊಟ್ಟ: ನೀವು ಧನ್ಯರು ನಾನು ನಿಮಗೆ ಹೇಳಿಕೊಡಬೇಕಾದದ್ದು ಏನೂ ಇಲ್ಲ. ನೀವು ದೇವಸ್ವರೂಪಿಗಳಾಗಿದ್ದೀರಿ ಎಂದನು.

ಆದ್ದರಿಂದ ದೇವ ದೇವನೊಲುಮೆಗೆ ನೈಜಭಕ್ತಿ, ಅಚಲವಾದ ಶ್ರದ್ಧೆ, ಪರಿಶುದ್ಧವಾದ ಮನಸ್ಸು–ಇವೇ ಮುಖ್ಯವಾದವು.

# 'ಸಿದ್ಧಗಂಗಾ'

ಆಗಸ್ಟ್ ೧೯೮೦

ಸಂಪುಟ–೧೭ ಸಂಚಿಕೆ–೮




ಚಂದಾ ವಿವರ

ಅಜೀವ ಸದಸ್ಯತ್ವ: **151-00** ರೂ

ವಾರ್ಷಿಕ ಚಂದಾ: **10-00** ರೂ

# ಈ ಸಂಚಿಕೆಯಲ್ಲಿ



## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಲೇಖಕರಿಂದ ಧಾರ್ಮಿಕ, ಸಾಂಸ್ಕೃತಿಕ ಐತಿಹಾಸಿಕ ಹಾಗೂ ವೈಚಾರಿಕ ಲೇಖನಗಳು, ಸಣ್ಣಕಥೆ, ಕವನ, ನಗೆಹನಿ, ಪ್ರಬಂಧ ಇವುಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್‌ಸ್ಕೇಪ್ ಸೈಜಿನ 3 ಪುಟಗಳಿಗೆ ಮೀರದಂತಿದ್ದು, ಕಾಗದದ ಒಂದೇ ಮಗ್ಗುಲಲ್ಲಿ ಬರೆಯಲ್ಪಟ್ಟಿರಬೇಕು. ಅಸ್ವೀಕೃತ ಲೇಖನಗಳನ್ನು ಹಿಂದಿರುಗಿಸಲಾಗುವುದಿಲ್ಲ. ಸ್ವೀಕೃತ ಲೇಖನಗಳಿಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿಪಡಿಸಿಕೊಳ್ಳುವ ಸಂಭಾವನೆಯನ್ನು ನೀಡಲಾಗುವುದು. ಲೇಖನಗಳನ್ನು

"ಸಂಪಾದಕರು"

"ಸಿದ್ಧಗಂಗಾ" [ಕನ್ನಡ ಮಾಸ ಪತ್ರಿಕೆ]

ಶ್ರೀಸಿದ್ಧಗಂಗಾ ಕ್ಷೇತ್ರ–572104 ತುಮಕೂರು ಜಿಲ್ಲೆ.

ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.

## ಚಂದಾದಾರರಲ್ಲಿ ವಿನಂತಿ

1980ನೆಯ ಹೊಸ ವರ್ಷದ ನಿಮ್ಮ ಚಂದಾ ನಂಬರ್ ಗುರುತಿಸಿಕೊಳ್ಳಿ. ಚಂದಾ ಅವಧಿ ಮುಗಿಯುವವರೆಗೆ ವಿಳಾಸ ಬದಲಾವಣೆ ಮತ್ತು ಇತರೆ ಬಗ್ಗೆ ವ್ಯವಹರಿಸುವಾಗ ನಿಮ್ಮ ವಿಳಾಸದ ಹಿಂಬದಿ ಇರುವ ಚಂದಾ ನಂಬರ್ ಅಥವಾ ಯಾರ ಮೂಲಕ ಸದಸ್ಯತ್ವ ಪಡೆದಿರುವಿರೋ ಆ ನಮ್ಮ ಪ್ರತಿನಿಧಿಗಳ ಹೆಸರನ್ನು ಸೂಚಿಸಿ ವ್ಯವಹರಿಸಿ.

ಚಂದಾ ಬಾಕಿ ಇರುವವರು ಸಂದಾಯ ಮಾಡಿ 'ಸಿದ್ಧಗಂಗಾ' ಮುನ್ನಡೆಗೆ ಸಹಕರಿಸಿ.

ಚಂದಾ ಅವಧಿ ಮುಗಿದಿರುವ ಮಾನ್ಯ ಓದುಗರು ಮುಂದಿನ ಸಾಲಿಗೆ ಮುಂದುವರಿಸಿಕೊಳ್ಳಬೇಕಾಗಿ ಪ್ರಾರ್ಥನೆ.

ಪ್ರಕಾಶಕರು

'ಸಿದ್ಧಗಂಗಾ' ಮಾಸ ಪತ್ರಿಕೆ, ಸಿದ್ಧಗಂಗಾ ಮಠ–572104 **ತುಮಕೂರು ಜಿಲ್ಲೆ.**

# " ಶ್ರೀ ಶ್ರೀಗಳವರ ಆಶೀರ್ವಚನ "

—ಪಿ. ಎನ್. ಚಂದ್ರಶೇಖರಯ್ಯ

**( 21-8-80 ಗುರುವಾರ ತುಮಕೂರು ತಾ|| ಕೆಸ್ತೂರು ಗ್ರಾಮದಲ್ಲಿ ಅಕ್ಕಮಹಾದೇವಿ ಸಮಾಜದಲ್ಲಿ ನೆರೆದಿದ್ದ ಆಸ್ತಿಕಬಂಧುಗಳನ್ನು ಕುರಿತು ಮಾಡಿದ ಆಶೀರ್ವಚನ )**

ಕರ್ನಾಟಕಲ್ಲಿ ವೀರ ವೈರಾಗ್ಯ ಚಕ್ರವರ್ತಿನಿಯಾಗಿ ಆತ್ಮ ಕಲ್ಯಾಣ ಮಾಡಿಕೊಂಡ ಮಹಾಶಿವಶರಣೆ ಅಕ್ಕ ಮಹಾದೇವಿಯ ಹೆಸರಿನಿಂದ ಸಮಾಜವನ್ನು ಮಾಡಿಕೊಂಡು ಧರ್ಮಪ್ರಚಾರ ಮಾಡುತ್ತಿರುವ ಕಾರ್ಯ ಪ್ರಶಂಸಾರ್ಹ ವಾಗಿದೆ. ಇಂದು ದೇಶದಲ್ಲಿ ಧರ್ಮಕ್ಕೆ ಚ್ಯುತಿಬಂದಿದೆ. ಮಾನವ ಕೇವಲ ಆಕಾರದಿಂದ ಮಾನವನಾಗಿದ್ದಾನೆ. ಇದು ನಿಜವಾದ ಮಾನವೀಯತೆಯಲ್ಲ. ಸುಸಂಸ್ಕೃತ ಬಾಳನ್ನು ಬಾಳುವುದು ನಿಜವಾದ ಮಾನವೀಯತೆ ನಮ್ಮ ಪೂರ್ವಜರು ನೆಮ್ಮದಿಯ ಬಾಳನ್ನು ಬಾಳುತ್ತಿದ್ದರು. ಅವರ ಜೀವನದಲ್ಲಿ ಸುಖ ಸಮೃದ್ಧಿಯ ನೆಲೆಯಿತ್ತು. ನವನಾಗರೀಕರೆಂದು ಹೇಳಿ ಕೊಳ್ಳುವ ಇಪತ್ತನ ಜನಾಂಗದ ಅನೀತಿ ಅವ್ಯವಹಾರಗಳನ್ನು ಕಂಡ ಚಿಂತನ ಶೀಲ ವ್ಯಕ್ತಿಗಳು ನಮ್ಮ ಭಾರತದ ಭವಿಷ್ಯವನ್ನು ಕುರಿತು ಆಲೋಚಿಸುತ್ತಿದ್ದಾರೆ. ನಮ್ಮ ದುರ್ದೈವ ನಮ್ಮದೇ ಆದ ಧರ್ಮ ಸಂಪತ್ತನ್ನು ನಾವೇ ಹಾಳು ಗೆಡವಿಕೊಳ್ಳುತ್ತಿದ್ದೇವೆ. ನಮ್ಮ ಭರತಖಂಡ ಹಳ್ಳಿಗಳ ನಾಡಾಗಿದ್ದರೂ ಧರ್ಮದ ತವರೂರಾಗಿದ್ಧಿತು. ಹಳ್ಳಿ ಹಳ್ಳಿ ಗಳಲ್ಲಿಯೂ ಒಂದೊಂದು ಮಠಗಳು ಸ್ಥಾಪಿತವಗಿರುತ್ತಿದ್ದವು. 'ಮಠಛ್ಛಾತ್ರಾದಿ ನಿಲಯಃ' ಎಂಬ ಅಮರ ಕೋಶದ ಸೂಕ್ತಿ ಯಂತೆ ಮಠಗಳಲ್ಲಿ ಓದಿಸುವ ಅಯ್ಯನವರು,ಹಲವು ಹಳ್ಳಿಯ ಎಲ್ಲ ಕೋಮಿನ ಮಕ್ಕಳನ್ನು ಕೂಡಿ ಕೊಂಡು ಧರ್ಮ ಬೋಧನೆಯನ್ನು ಮಾಡುತ್ತಿದ್ದರು. ಆ ಸ್ವಾಮಿಗಳು ಸ್ವಯಂ ಪರಿಪೂರ್ಣ ಪಂಡಿತರಾಗಿರುತ್ತಿದ್ದರು. ಮಕ್ಕಳೆ ಗಲ್ಲದೆ ಹಳ್ಳಿಯ ಅನಕ್ಷರಸ್ಥ ಜನಗಳನ್ನು ಕುಳ್ಳಿರಿಸಿಕೊಂಡು ಸಂಜೆಯಲ್ಲಿ ಧರ್ಮಬೋಧನೆಯನ್ನು ಮಾಡುತ್ತಿದ್ದರು. ಓದು ಬರಹ ಬರದಿದ್ದರೂ ಪ್ರತಿನಿತ್ಯ ಕೇಳಿದ ಸಂಸ್ಕಾರದಿಂದಲೇ ಹಳ್ಳಿಗಾಡಿನ ಜನಗಳು ಸುಸಂಸ್ಕೃತರಾಗಿ ಧರ್ಮ ಭಾವನೆಯುಳ್ಳವರಾಗಿ ಸ್ವಾವಲಂಬಿಗಳಾಗಿ ಸಮೃದ್ಧವಾದ ಧಾರ್ಮಿಕ ಜೀವನವನ್ನು ಸಾಗಿಸುತ್ತಿದ್ದರು. ಓದು ಬರೆಹ ಬರದಿದ್ದರೂ ಕೇಳುವುದರಲ್ಲಿ ನಿತ್ಯ ಶ್ರದ್ಧೆಯಿದ್ದರೆ, ಹಿಂದಣ ಕೇಳವಿಕೆಯ ಸಂಸ್ಕಾರದಿಂದ ಮನಸ್ಸಿನ ಮೇಲೆ ಹೊಸ ಪ್ರಭಾವವು ಕೆಲವು ದಿನಗಳ ಮೇಲೆ ಆಗುತ್ತದೆ. ಆ ಸಂಸ್ಕಾರವು ಸುಪ್ತವಾಗಿದ್ದು ಮನಸ್ಸನ್ನು ಶುದ್ಧಗೊಳಿಸಿ ಆಕಡೆ ಒಯ್ಯುತ್ತದೆ. ಇಂದು ಮಠಾಧಿಪತಿಗಳಾದ ನಾವು ಹಲವು ಸಂಸ್ಥೆಗಳನ್ನು ಕಟ್ಟಿಕೊಂಡು ಧರ್ಮಪ್ರಚಾರದ ಕಡೆ ಹೆಚ್ಚು ಗಮನ ಕೊಡಲು ಸಾಧ್ಯವಿಲ್ಲವಾಗಿದೆ, ಇಂದು ಆ ಕೆಲಸವನ್ನು ಮಠಾಧಿಪತಿಗಳು ಮಾಡಬೇಕಾಗಿದೆ. ಜನತೆಯನ್ನು ಧರ್ಮದ ಆಚರಣೆಯಲ್ಲಿ ತೊಡಗುವ ಪ್ರವೃತ್ತಿಯುಳ್ಳವರನ್ನಾಗಿ ಮಾಡಬೇಕು. ಹಿಂದೆ ಹಳ್ಳಿಯ ಮಂದಿ ಮುಗ್ಧರಾಗಿ ಧಾರ್ಮಿಕ ಭಾವನೆಯುಳ್ಳವರಾಗಿರುತ್ತಿದ್ದರೆ, ಆ ತಾಯಿ ತಂದೆಗಳ ಪ್ರಭಾವ ಮಕ್ಕಳ ಮೇಲಾಗುತ್ತಿತ್ತು. ಈ ವಿಚಾರವಾಗಿ ನನ್ನ ಸ್ವಂತವಿಶಯವನ್ನೇ ತೆಗೆದುಕೊಂಡರೆ, ನನಗೇನಾದರೂ ಈ ವಿಧವಾದ ಸಂಸ್ಕಾರವು ನನ್ನಲ್ಲಿ ಬರಬೇಕಾದರೆ ನನಗೆ ಜನ್ಮಕೊಟ್ಟವರಿಗೆ ಸೇರಬೇಕಾಗುತ್ತದೆ. ಅವರು ಓದು ಬರೆಹ ಬಲ್ಲವರಲ್ಲದಿದ್ದರೂ ಹಳ್ಳಿಗಳಲ್ಲಿ ಶ್ರಾವಣ ಮತ್ತು ಕಾರ್ತೀಕ ಮಾಸಗಳಲ್ಲಿ ನಡೆಯುತ್ತಿದ್ದ ಪುರಾಣ ಪ್ರವಚನಗಳನ್ನು ಕೇಳಿ ಬಂದು ಸಣ್ಣ ಸಣ್ಣ ಕಥೆಗಳನ್ನು ನನಗೆ ಹೇಳುತ್ತಿದ್ದರು. ಮತ್ತು ಬೆಳಗಿನಜಾವದಲ್ಲಿ ಎದ್ದು ರಾಗಿ ಬೀಸುವ ಕಲ್ಲಿನ ಮುಂದೆ ಕುಳಿತು ರಾಗಿ ಬೀಸುವಾಗ ಹಾಡುವ ಶಿವಶರಣರ ವಚನ ಮತ್ತು ಸಾಂಗತ್ಯಗಳು ಸ್ವರ್ಗೀಯವಾಗಿರುತ್ತಿದ್ದವು. ನಾನು ಎಚ್ಚೆತ್ತು ಕೇಳಿಸಿಕೊಳ್ಳು ತ್ತಿದ್ದೆ. ಅವರ ಸಂಸ್ಕಾರ ದೊಡ್ಡದು. ಮನೆಯಲ್ಲಿ ಒಬ್ಬತಾಯಿ ಧರ್ಮಶ್ರದ್ಧೆ . ಮತ್ತು ಸಂಸ್ಕಾರಿಯಾದರೆ ಇಡೀ

( 8 ನೇ ಪುಟ ನೋಡಿ )

# ಶೂನ್ಯ ಸಂಪಾದನೆ ಸುಲಭವಾಗಿ ಮೋಸಗೊಳಿಸುವ ಕೃತಿಯೇ ? ಒಂದು ವಿವೇಚನೆ.

—ಎಸ್. ಎಸ್. ಭೂಸರಡ್ಡಿ

ಕಾಲಪುರುಷನ ಮರವೆಯಿಂದ ಮಸಳಿಸಿಹೋದ ಸಂದಿಗ್ಧ ಸಮಯ.ದಲ್ಲಿ ' ಶೂನ್ಯ ಸಂಪಾದನೆ ' ಯೆಂಬ ಅಪೂರ್ವವಾದ ಆಧ್ಯಾತ್ಮಿಕ ಸಂವಾದ ರೂಪಕವು ಮೈದಾಳಿತು. ಇದರಿಂದ ವೀರಶೈವ ಧರ್ಮ ಮತ್ತು ವಾಙ್ಮಯಕ್ಕೆ ಸ್ಥಿರಸ್ವರೂಪದ ಒಂದು ವ್ಯವಸ್ಥೆ ಏರ್ಪಟ್ಟಿತು ಎಂಬುದು ಐತಿಹಾಸಿಕ ಸತ್ಯವೆಂಬುದನ್ನು ಇಂದಿನವರು ಮನದಟ್ಟುಮಾಡಿಕೊಳ್ಳಬೇಕಾಗಿದೆ. ವೀರಶೈವ ತತ್ವ ಮತ್ತು ಆಚಾರ ಧರ್ಮದ ವಿವರಣೆ ವಿಶದವಾದಂತೆ ಅವಕ್ಕೆ ಮೂಲ ಮಾತೃಕೆಯಾದ ವಚನವಾಙ್ಮಯದ ಅರ್ಥವಿಕೆಗೆ ಸಹಾಯಕವಾದ ಸಾಮಗ್ರಿ ಸಿದ್ಧವಾಯಿತೆಂಬುದು ಯಾವ ಹೆಡ್ಡನಿಗೂ ಸೂಯಪ್ರಕದಷ್ಟು ಸ್ಪಷ್ಟವಾಗಿ ತಿಳಿಯುವ ಸಂಗತಿಯಾಗಿದೆ. "ಈ ಕೃತಿಯನ್ನು ಎಚ್ಚರಿಕೆಯಿಂದ ಅಭ್ಯಾಸ ಮಾಡುವವರಿಗೆ ವೀರಶೈವ ಧರ್ಮದ ಪರಿಚಯವಾಗದಿದ್ದರೆ ಇನ್ನು ಯಾವ ಗ್ರಂಥದಿಂದ ಆಗುತ್ತದೆಯೋ ತಿಳಿಯದು" ಎಂಬುದಾಗಿ ಪ್ರಾಮಾಣಿಕವಾಗಿ ನಿವೇದಿಸಿದ ಡಾ॥ ಚಿದಾನಂದ ಮೂರ್ತಿಯವರ ಮಾತುಗಳು ಮನನೀಯವಾಗಿವೆ. ಕಾರಣವಿಷ್ಟೇ ತೂರಿ ಹೋದ ಮುತ್ತು ಹವಳಗಳನ್ನು ಕೂಡಿಸಿ, ಅವಕ್ಕೆ ಒಂದು ವ್ಯವಸ್ಥಿತ ರೂಪವನ್ನು ಕೊಟ್ಟ ಮನ್ನಣೆ ಈ ಸಂಕಲನಕಾರರಿಗೆ ಸಲ್ಲುತ್ತದೆ. ಈ ಗ್ರಂಥಕ್ಕೆ ಶಿವಶರಣರ ವಚನಗಳ ಕಟ್ಟುಗಳೇ ಮೂಲಸಾಮಗ್ರಿಯೆಂಬುದನ್ನು ಕನ್ನಡಿಗರು ಅವಶ್ಯವಾಗಿ ಗಮನಿಸಬೇಕಾದ ಮಹತ್ವದ ಸಂಗತಿ ಇವುಗಳ ಫಲವಾಗಿ ಮೂಡಿ ಬಂದ ತತ್ವದರ್ಶನ ಗ್ರಂಥವೇ ಶೂನ್ಯ ಸಂಪಾದನೆ. ಇದರಲ್ಲಿ ಶರಣರಲ್ಲಿ ನಡೆಯುತ್ತಿದ್ದ ಅತಿ ಗಹನವಾದ ವಿಷಯಗಳ ಪರಸ್ಪರ ಸಂಭಾಷಣೆಗಳು ಅತ್ಯಂತ ಹೃದಯಂಗಮವಾಗಿವೆ. ಮೊಗ್ಗೆಯ ಮಾಯಿದೇವರಿಂದ ರಚಿತವಾದ 'ಏಕೋತ್ತರ ಶತಸ್ಥಲ' ದಲ್ಲಿ ಅರ್ಥವಾಗದ ಅನೇಕ ವಿಷಯಗಳನ್ನು ಬಹು ಸರಸವಾಗಿ ಸರಳವಾಗಿ ವರ್ಣಿಸಿರುವುದು ಗೋಚರಿಸುತ್ತದೆ. ಗ್ರಂಥವು ಕಥಾರೂಪದಲ್ಲಿದ್ದರೂ ಸಹ, ಅದರಲ್ಲಿ ಆಧ್ಯಾತ್ಮಿಕ ತತ್ವಗಳೇ ತುಂಬಿಕೊಂಡಿವೆ. ಆ ಧರ್ಮದ ಪ್ರಯೋಗಿಕ ರೂಪವೇ ಅದರಲ್ಲಿ ಹೆಚ್ಚಾಗಿ ಬರೆಯಲಾಗಿದೆ. ಜೀವನದ ಅನುಭವವೇ ತುಂಬಿದೆ. ' ವಾಕ್, ಮನ, ಬುದ್ಧಿ ಇವುಗಳಿಗೆ ಯಾವುದು ಅತೀತವೋ, ಸತ್, ಚಿತ್, ಆನಂದಮಯವಾದುದು ಯಾವುದೋ ಅಂತಹ ಪರಬ್ರಹ್ಮ ವಸ್ತುವನ್ನು ಕೇವಲ ಅನುಭವದಿಂದ ತಿಳಿಯುವುದಕ್ಕೆ ಅಥವಾ ವಾಕ್, ಮನ, ಬುದ್ಧಿ ಇವುಗಳಿಗೆ ಯಾವುದು ತೋರಿಕೆಯಲ್ಲಿ ' ಶೂನ್ಯ ' ವಾಗಿರುವುದೋ ಅಂತಹ ವಸ್ತುವಿನ ಸಂಪಾದನೆಗೆ ' ಶೂನ್ಯ ಸಂಪಾದನೆ ' ಎಂದು ಅರ್ಥಮಾಡಲಾಗಿದೆ. ಇದು ಬುದ್ಧನು ಹೇಳಿರುವ ನಿರ್ವಾಣ ಸ್ಥಾನದ ಶೂನ್ಯದ ಪ್ರತಿಪಾದನೆಯಲ್ಲ;; ಏಕೆಂದರೆ ವೀರಶೈವರು ಮಿಥ್ಯಾವಾದಿಗಳಲ್ಲ. ಜೀವ, ಜಗತ್ತುಗಳನ್ನು ಇವರು ಸತ್ಯವೆಂದು ತಿಳಿಯುತ್ತಾರೆ. ಶಿವನಂತೆ ಶಿವನ ಶಕ್ತಿಯೂ ಸತ್ಯವಾದುದರಿಂದಲೇ ಇದು. 'ವಿಶಿಷ್ಟಾದ್ವೈತ'ಶಕ್ತಿ ಅದ್ವೈತ ಧರ್ಮದಂತೆ ಇದರಲ್ಲಿ ಕರ್ಮ ಸನ್ಯಾಸವಿಲ್ಲ. ಭಗವದ್ಗೀತೆಯಂತೆ ಕರ್ಮದ ಪ್ರತಿಪಾದನೆಯಿದೆ. ಗೀತೆಯ ನಿಷ್ಕಾಮ ಕರ್ಮಕ್ಕೆ ವೀರಶೈವರಲ್ಲಿ ತುಂಬಾ ಮನ್ನಣೆಯುಂಟು. ಉಪನಿಷತ್ಕಾರರಂತೆ ವಚನಕಾರರೂ ಸಹ ವಿರಕ್ತಿಯನ್ನು ಬೋಧಿಸುವುದಿಲ್ಲ, ಸಂಸಾರದಲ್ಲಿದ್ದುಕೊಂಡು ಶಿವಾನುಭವವನ್ನು ಸ್ಥಾಪಿಸುವ ರೀತಿಯನ್ನೇ ಬೋಧಿಸಿದ್ದಾರೆ. ಆದುದರಿಂದಲೇ ವಚನಗಳಿಗೆ 'ಕನ್ನಡದ ಉಪನಿಷತ್ತುಗಳೆಂದು ಸಹ ಹೆಸರಿಸಿದೆ. ಗ್ರಂಥದ ಚರ್ಚೆಗಳ ಮರೆಯಲ್ಲಿ ಷಟ್‌ಸ್ಥಲದ ತತ್ವಗಳೂ, ಗುರು ಲಿಂಗ ಜಂಗಮ ದಾಸೋಹದ ಔನ್ನತ್ಯತೆಯೂ ಇಷ್ಟಲಿಂಗ ಪೂಜೆಯ ಗುಟ್ಟು ಚನ್ನಾಗಿ ವಿವೇಚಿಸಲ್ಪಟ್ಟಿದೆ. ಭಕ್ತಿ, ಕ್ರಿಯೆ, ವೈರಾಗ್ಯ ಇವುಗಳ ವಿಚಾರವನ್ನು ಗ್ರಂಥವು ಕೂಲಂಕಷವಾಗಿ ತಿಳಿಸುತ್ತದೆ. ಅನುಭವ ಮಂಟಪದ ಆದರ್ಶ ಧ್ಯೇಯ, ಅದರ ಒಳತತ್ವ ಮತ್ತು ಉದಾತ್ತಭಾವನೆಗಳನ್ನು ತಿಳಿಯ ಬೇಕಾದರೆ ' ಶೂನ್ಯ ಸಂಪಾದನೆ ' ಯನ್ನುಳಿದು ಬೇರೊಂದು ಗ್ರಂಥವಿಲ್ಲ. ಪ್ರತಿ ಅನುಭವಿಗೂ ಸಹ ಇದು ಮಾರ್ಗದರ್ಶಕವಾಗಿದೆ. ಅನುಭವ ಮಂಟಪದ ಎಲ್ಲ ವಿಷಯಗಳೂ ಅದರ ಧಾರ್ಮಿಕ, ಸಾಮಾಜಿಕ ನೈತಿಕ ಸ್ವರೂಪವೆಲ್ಲವೂ ಇದರಲ್ಲಿ ಅಡಕವಾಗಿವೆ " ಎಂಬುದಾಗಿ ಶ್ರೀ ಟಿ. ಎನ್. ಮಹದೇವಯ್ಯನವರು ' ಅನುಭವ ಮಂಟಪ ' ವೆಂಬ ಲೇಖ

( 8 ನೇ ಪುಟ ನೋಡಿ )

( 5 ನೇ ಪುಟದಿಂದ )

ಕುಟುಂಬವೇ ಸುಸಂಸ್ಕೃತವಾಗುತ್ತದೆ, ಇಡೀ ಹಳ್ಳಿಯೇ ಸುಸಂಸ್ಕೃತವಾಗುತ್ತದೆ. ಇದಕ್ಕೆ ನೇರವಾದ ಉದಾಹರಣೆ ಕೆಸ್ತೂರಿನವರೇ ಆದ ನಂಜುಂಡಪ್ಪ ಅವರ ಕುಟುಂಬದವರು. ಅವರು ಮಾಡುತ್ತಿರುವ ಈ ಸಮಾಜ ಸೇವೆಯಿಂದ ಹಳ್ಳಿಯೇ ಸುಸಂಸ್ಕೃತವಾಗುವ ಅವಕಾಶವು ಈ ಗ್ರಾಮಕ್ಕೆ ದೊರೆತಿದೆ. ದಿನಕ್ಕೆ ಒಂದು ಬಾರಿ ಹಳ್ಳಿಯವರೆಲ್ಲಲೂ ಒಟ್ಟು ಗೂಡಿ ಒಂದು ಕಡೆ ಕುಳಿತು ಭಗವಂತನ ಧ್ಯಾನಮಾಡುವುದರಿಂದ ಹಳ್ಳಿಗಳಲ್ಲಿ ಸಹಕಾರ ಮತ್ತು ಸಹಬಾಳ್ವೆಯ ಜೀವನ ಹಸನಾಗುತ್ತದೆ. ಬದುಕು ಸುಖದಾಯಕವಾಗುತ್ತದೆ. ಜನತೆ ಇಂದು ಕೇವಲ ಸುಖಾಪೇಕ್ಷೆಯಾಗಿದೆ. ಸುಖವೆನ್ನುವುದು ಒಬ್ಬರಿಂದ ಮತ್ತೊಬ್ಬರಿಗೆ ಕೊಡುವ ವಸ್ತುವಲ್ಲ. ವಸ್ತುವನ್ನು ಕೊಟ್ಟು ಸುಖಪಡಿಸಲಾಗುವುದಿಲ್ಲ. ಸುಖವೆಂಬುದು ಹಣ ರೇಡಿಯೋ ಮೊದಲಾದ ವಸ್ತುಗಳಿಂದ ತೃಪ್ತಿಯಾಗುವುದಿಲ್ಲ. ಅದು ಮನಸ್ಸಿನ ತೃಪ್ತಿಯನ್ನು ಅವಲಂಬಿಸಿರುತ್ತದೆ. ಮನಸ್ಸು ತೃಪ್ತಿಪಟ್ಟಾಗ ಜೀವನ ಸುಖಮಯವಾಗುತ್ತದೆ. ತೃಪ್ತಿಯಿಂದ ಸಂತೋಷದ ಜೀವನ ನಡೆಸಲು ಸಾಧ್ಯವಾಗುತ್ತದೆ. "ತೃಪ್ತಿಯು ತಾರಕಮಂತ್ರ" ದುಡಿಮೆ. ದುಡಿಮೆ ಸರ್ವ ಸುಖ ಸಂತೋಷ ಮತ್ತು ತೃಪ್ತಿಗಳನ್ನು ಕೊಡುವ ಕಲ್ಪವೃಕ್ಷ. ವ್ಯಕ್ತಿಯ ಒಂದಲ್ಲಾ ಒಂದು ಉದ್ಯೋಗ ಅವಲಂಬನೆಯನ್ನು ಮಾಡಿಕೊಂಡಾಗ ನಮ್ಮ ಜೀವನದಲ್ಲಿ ಸ್ವಾವಲಂಬನೆಯು ಉಂಟಾಗುತ್ತದೆ. ಮತ್ತೊಬ್ಬರಿಗೆ ಲಂಬನೆಯಾಗುವ ಅವಕಾಶ ದೂರವಾಗುತ್ತದೆ. "ಧರೆಗೆ ಯಾಚನೆಗಿಂತ ಲಘು ತರವುಂಟೆ ?" ಮತ್ತೊಬ್ಬರನ್ನು ಬೇಡುವುದು ಅತ್ಯಂತ ಕೀಳು ಹಾಗೂ ಹಗುರವಾದುದು. ಆದುದರಿಂದ ಬೇಡುವ ಜೀವನವನ್ನು ತೊಲಗಿಸಿ ಸ್ವಾವಲಂಬನ ಜೀವನವನ್ನು ಸಾಗಿಸಬೇಕಾದರೆ ಜೀವನದಲ್ಲಿ ಉದ್ಯೋಗ ಮುಖ್ಯ. "ಉದ್ಯೋಗಿನಂ ಪುರುಷ ಸಿಂಹಮುಪೈತಿ ಲಕ್ಷ್ಮೀಃ" ಎಂಬ ಮಾತು ಅರ್ಥವತ್ತಾಗಿದೆ. ಅಣ್ಣ ಬಸವಣ್ಣನವರು "ಕಾಯಕವೇ ಕೈಲಾಸ" ವೆಂಬಂತೆ ನಾವು ಮಾಡುವ ದುಡಿಮೆಯಿಂದಲೇ ದೇವದೇವನ ಸಾಕ್ಷಾತ್ಕಾರವನ್ನು ಪಡೆಯಬಹುದು. ದೇವ ದೇವನ ಸಾನ್ನಿಧ್ಯವನ್ನು ಪಡೆಯುವುದೇ ಮನುಷ್ಯನ ಜೀವನದ ಗುರಿ ಅದೇ ಅವನ ಬಾಳಿನಲ್ಲಿ ಸಂತೋಷ ತೃಪ್ತಿಯನ್ನು ತರಬಲ್ಲದು, ಇಷ್ಟುಸಾಕು. ಎಲ್ಲರಿಗೂ ದಯಾಮಯನಾದ ಪರಶಿವನು ಧರ್ಮ ಭಾವನೆಯನ್ನುಂಟುಮಾಡುವ ಸದ್ಬುದ್ಧಿಯನ್ನು ಮತ್ತು ಮಂಗಳವನ್ನು ಅನುಗ್ರಹಿಸಲಿ.

---

( 6 ನೇ ಪುಟದಿಂದ )

ದಲ್ಲಿ ಬರೆದ ಮೇಲಣ ಮಾತುಗಳು ಗಮನಾರ್ಹವಾಗಿವೆ. ಹಾಗೆಯೇ ಜಗತ್ತಿನ ಧಾರ್ಮಿಕ ಇತಿಹಾಸದಲ್ಲಿ ಸಂಘಶಕ್ತಿಯಿಂದ ಆದ ಅನೇಕ ಮಹತ್ವದ ಕೆಲಸಗಳ ಉಲ್ಲೇಖಗಳು ದೊರೆಯುತ್ತವೆ. ಪ್ಲೇಟೋ ಸಂಗ್ರಹಿಸಿರುವ ಸೋಕ್ರೇಟಿಸನ ಸಂಭಾಷಣೆಗಳು, ತಮಿಳುನಾಡಿನ ಸಂಘ ಸಾಹಿತ್ಯ, ಮಧ್ಯಕಾಲದ ಪರ್ಶಿಯಾ ದೇಶದ ಸೂಫಿ ಸಾಹಿತ್ಯಗಳನ್ನು ಅನುಭವ ಮಂಟಪದ ಸಾಹಿತ್ಯ ಸೃಷ್ಟಿಗೆ ಹೋಲಿಸ ಬಹುದು. ಆದರೆ ಒಬ್ಬ ವ್ಯಕ್ತಿಯನ್ನೇ ಅವಲಂಬಿಸದೆ, ತತ್ವಗಳ ಬುನಾಧಿಯ ಮೇಲೆ ನಿಂತು ಸಮಾಜ ಧರ್ಮ ವ್ಯಕ್ತಿ ಪ್ರಗತಿಗಳೆಲ್ಲವನ್ನೂ ಸಮಾನ ದೃಷ್ಟಿಯಿಂದ ಅನುಲಕ್ಷಿಸಿ ಜನ ಜೀವನದ ಎಲ್ಲ ಅಂಗಗಳ ಮೇಲೂ ತನ್ನ ಪ್ರಭಾವ ಮುದ್ರೆಯನ್ನೊತ್ತಿದ ಕೀರ್ತಿ ಅನುಭವಮಂಟಪಕ್ಕೆ ಸೇರುತ್ತದೆ. ಅನುಭವಮಂಟಪದ ಶರಣರ ಜಿಜ್ಞಾಸು ಲಕ್ಷಣ, ವಿಚಾರ ಧೋರಣೆ ಹಾಗೂ ಸತ್ಯದ ಸ್ಪಷ್ಟ ಆವಿಷ್ಕರಣ- ಇವು ಅವರ ಬೋಧನೆ ಹಿರಿಯ ಸ್ಥಾನವನ್ನು ಕಲ್ಪಿಸಿಕೊಟ್ಟವೆ. ಹದಿನೈದನೆಯ ಶತಮಾನದ ಮಧ್ಯಭಾಗದಲ್ಲಿ ಆಗಿ ಹೋದ ಗೂಳೂರು ಸಿದ್ಧವೀರಣ್ಣಾಚಾರ್ಯನು ರಚಿಸಿರುವ "ಶೂನ್ಯ ಸಂಪಾದನೆ' ಯನ್ನು ಅನುಭವ ಮಂಟಪದ ಕೈಪಿಡಿಯನ್ನಾಗಿ ಸ್ವೀಕರಿಸಬಹುದು. ಶಿವಶರಣ, ಶಿವಶರಣೆಯರ ವಚನಗಳಿಂದಲೇ ಮಂಟಪದ ವಿಚಾರ ವಿನಿಮಯ ಸರಣಿಯನ್ನು ಜೋಡಿಸಿ ಸಿದ್ಧವೀರಣಾರ್ಯನು ಅಪೂರ್ವವಾದ ಗ್ರಂಥವನ್ನು ರಚಿಸಿದ್ದಾನೆ. ರೀತಿ ಮತ್ತು ನೀತಿ ಎರಡೂ ದೃಷ್ಟಿಯಿಂದಲೂ ಇದಕ್ಕೆ ಸಮಾನವಾದ ಈ ಬಗೆಯ ಗ್ರಂಥ ಕನ್ನಡದಲ್ಲಿ ಬೇರೊಂದಿಲ್ಲ. ಇದನ್ನು ಪ್ಲೇಟೋವಿನ ಸಂಭಾಷಣೆಗೆ ಹೋಲಿಸುವುದೂ ತಪ್ಪಾಗಲಾರದು ಎಂದು ಅ ನ. ಕೃ. ಸ್ಪಷ್ಟವಾಗಿ ಅಭಿಪ್ರಾಯ ಪಟ್ಟಿದ್ದಾರೆ. ಇಂತಹ ಕೃತಿ ಮೋಸದ ಕೃತಿಯೇ ? 'ಶಂಭಾ' ಹೇಳುವುದಕ್ಕೆ ಆಧಾರ ಪ್ರಮಾಣಗಳಾದರೂ ಬೇಡವೇ ? ಈ ಬಗೆಯ ಕುಚೇಷ್ಟೆ ಒಳ್ಳೆಯದೇ ? ಇತ್ತೀಚೆಗೆ ಶಂಭಾ ಜೋಶಿ 'ಶೂನ್ಯ ಸಂಪಾದನೆ ಸುಲಭವಾಗಿ ಮೋಸಗೊಳಿಸುವ ಶ್ರೇಷ್ಠ ಕೃತಿ' ಎಂಬುದಾಗಿ ಬಹು ಚಮತ್ಕಾರಿತವಾಗಿ ಮಾತನಾಡಿದ ಬಗೆಗೆ ಒಂದು ಪ್ರತಿಕ್ರಿಯೆ.

( ಮುಂದುವರಿದ ಲೇಖನ )

# ಶ್ರೀ ಸಿದ್ಧಗಂಗಾ ಕ್ಷೇತ್ರ : ಪರಿಸರ ಮತ್ತು ಇತಿಹಾಸ

—ಚನ್ನಪ್ಪ ಎರೇಸೀಮೆ

**ಸಿದ್ಧಲಿಂಗೇಶ್ವರರ ಸಂಚಾರ:–**

**ಸಿದ್ಧಗಂಗಾ ಕ್ಷೇತ್ರಕ್ಕೆ ಆಗಮನ :**

ತಮ್ಮೆಲ್ಲ ಗುರುವರ್ಗದವರ ಹಾಗೆಯೇ ತೋಂಟದ ಸಿದ್ಧಲಿಂಗೇಶ್ವರರು ತಮ್ಮ ಹರದನಹಳ್ಳಿಯ ನಿರಂಜನ ಜಂಗಮಾಧಿಕಾರವನ್ನು ತಮ್ಮ ವಾತ್ಸಲ್ಯಕ್ಕೆ ಪಾತ್ರರಾಗಿದ್ದ ಬೋಳಬಸವದೇವರೆಂಬುವವರಿಗೆ ವಹಿಸಿ,[18] ತಾವು ಸಂಚಾರ ಕೈಗೊಳ್ಳುತ್ತಾರೆ. ಸಿದ್ಧಲಿಂಗೇಶ್ವರರ ಸಂಚಾರ ಕಾಲದಲ್ಲಿ ೭೦೧ ಜನ ವಿರತರೂ ಮೂರು ಸಾವಿರ ಜನ ಚರಮೂರ್ತಿಗಳೂ ಪಾಲ್ಗೊಂಡಿದ್ದರು. ಈ ಎಲ್ಲರೊಡನೆ ಹರದನಹಳ್ಳಿಯನ್ನು ಬಿಟ್ಟು ಪ್ರವಾಸ ಕೈಗೊಂಡ ಸಿದ್ಧಲಿಂಗೇಶ್ವರರು ಸಮಗ್ರ ಭಾರತವನ್ನು ಪ್ರವಾಸಮಾಡಿದರು. ಅವರು ಸಂದರ್ಶಿಸಿ, ತಂಗಿ, ಧರ್ಮಪ್ರಸಾರ ಮಾಡಿದ ಸ್ಥಾನಗಳಲ್ಲಿ ಸೌರಾಷ್ಟ್ರ, ಶ್ರೀಶೈಲ, ಕೊಲ್ಲಿಪಾಕಿ, ಕೇದಾರ ದ್ರಾಕ್ಷಾರಾಮ, ಗೋಕರ್ಣ, ಹಂಪೆ, ತ್ರ್ಯಂಬಕೇಶ್ವರ, ಶಿವಗಂಗೆ, ರಾಮೇಶ್ವರ, ಪೊನ್ನಾಂಬಲ, ಕಂಚಿ, ಕಾಳಹಸ್ತಿ ಚಿದಂಬರಂ, ಅರುಣಾಚಲ, ಮೊದಲಾದವು ಮುಖ್ಯಸ್ಥಳಗಳು. ಇವಲ್ಲದೆ ಹೊಳಲುಗುಂದ, ಕಾರ್ಕಳ, ಗಾಳಿಪೂಜೆ ಜಿಟ್ಟ, ಹೊನ್ನುಡಿಕೆ, ಚೆನ್ನಪಟ್ಟಣ, ಮಂಗಳವಾಡ, ಕಲ್ಯಾಣಗಳನ್ನು ಹೇಳಬಹುದು. ಇಲ್ಲೆಲ್ಲ ಸಂಚರಿಸಿ ಅಗತ್ಯವಿದ್ದೆಡೆಗಳಲ್ಲಿ ಮಠಮಾನ್ಯಗಳನ್ನು ಸ್ಥಾಪಿಸಿ, ಅವಕ್ಕೆಲ್ಲ ಚರಮೂರ್ತಿಗಳನ್ನು ನೇಮಿಸಿ ವೃದ್ಧಾಪ್ಯದ ಹೊತ್ತಿಗೆ ಅಂದರೆ ಕ್ರಿ.ಶ.೧೪೭೦–೮೦ ರೊಳಗಿನ ದಶಕದ ಸುಮಾರಿಗೆ ಶ್ರೀ ಸಿದ್ಧಗಂಗಾಕ್ಷೇತ್ರಕ್ಕೆ ಬರುತ್ತಾರೆ. ಇಲ್ಲಿ ಅನೇಕ ವರ್ಷಗಳ ಪೂಜಾನುಷ್ಠಾನಾದಿಗಳನ್ನು ಮೇಲಣಗವಿಯಲ್ಲಿಮಾಡಿ ಅನೇಕ ಪವಾಡಗಳನ್ನು ಮೆರೆದು ಸಿದ್ಧಗಂಗೆಯಿಂದ ನೇರನಾಗಿ ಕೇತಸಂಧಿ, ತುಮಕೂರು, ದೇವರಾಯಪಟ್ಟಣಗಳಲ್ಲಿ, ಗೂಳೂರು, ಹೆಬ್ಬೂರು, ಕುಣಿಗಲ್ಲು ಹುಲಿಯೂರುದುರ್ಗಗಳ ಮಾರ್ಗವಾಗಿ ಹೊರಟು ಕಗ್ಗೆರೆಯಲ್ಲಿ ಕೆಲವುದಿನಗಳಿದ್ದು ಎಡೆಯೂರಿನಲ್ಲಿ ಕ್ರಿ.ಶ. ೧೪೮೦ ರ ಹೊತ್ತಿಗೆ ಶಿವಸಮಾಧಿಯನ್ನು ಹೊಂದುವರು. ಈ ಹೊತ್ತಿಗಾಗಲೆ ಸಿದ್ಧಗಂಗೆ ಪವಿತ್ರಕ್ಷೇತ್ರವೆಂದು ಪ್ರಸಿದ್ಧಿಹೊಂದಿ ಅನೇಕ ಕಡೆಯಿಂದ ಭಕ್ತಾದಿಗಳನ್ನು ಆಕರ್ಷಿಸುತ್ತಾ ಪವಿತ್ರ ಕ್ಷೇತ್ರವೆನಿಸಿತ್ತು.

**ಸಿದ್ಧಗಂಗೆ ಮತ್ತು ಪರಿಸರದಲ್ಲಿ ಸಿದ್ಧಲಿಂಗೇಶ್ವರರು ಮೆರೆದ ಪವಾಡಗಳು**

ಹೇರಂಬ ಕವಿಯ ಸಿದ್ಧಲಿಂಗೇಶ್ವರ ಸಾಂಗತ್ಯದಲ್ಲಿ 'ಸಿದ್ಧಗಂಗಾ ಜಲದ' ಮಹಿಮೆಯನ್ನು ವಿಶೇಷವಾಗಿ ವರ್ಣಿಸಲಾಗಿದೆ.[19] ಈ 'ಸಿದ್ಧಗಂಗಾ ಜಲದ' ಮಹಿಮಾತಿಶಯವು ಕರ್ನಾಟಕ ತಮಿಳುನಾಡಿನಲ್ಲೂ ಪಸರಿಸಿತ್ತು.

---

18 ಈ ಬೋಳಬಸವದೇವರಿಗೆ ನಿರಕ್ಷರಕುಕ್ಷಿ ಬೋಳಬಸವೇಶ್ವರರೆಂದೂ ಹೆಸರು. ಇವರು ವಿದ್ಯಾಭ್ಯಾಸ ಮಾಡಿದವರಲ್ಲ. ಶಿವಾನುಭವ ಸಂಪತ್ತಿನಲ್ಲಿ ಅದ್ವಿತೀಯರೆನಿಸಿದ್ದರು ಕೆಲವುಜನ ಕುಚೋದ್ಯಗಾರರು ಇವರ ಬಗ್ಗೆ ಕುಕ್ಷಿಯನ್ನು ಬಗೆದೂ ಮೂರಕ್ಷರ ವಿಲ್ಲದವರು ಎಂದು ಚೇಷ್ಟೆ ಮಾಡಿದರಂತೆ ಆಗ ನೊಂದುಕೊಂಡ ಬೋಳಬಸವೇಶ್ವರರು ೨೧ ದಿನಗಳವರೆಗೆ ಪ್ರವಾಸ ವಿಲ್ಲದೆ ಒಂದು ಗುಡ್ಡದಲ್ಲಿಕುಳಿತು ತಮ್ಮ ಗುರುಗಳಾದ ತೋಂಟದ ಸಿದ್ಧಲಿಂಗೇಶ್ವರರನ್ನು ಧ್ಯಾನಮಾಡಲು ತರ್ಕವ್ಯಾಕರಣಾದಿ ಶಾಸ್ತ್ರಜ್ಞಾನವೂ, ಪುರಾಣ ಪ್ರವಚನಾದಿ ವಿದ್ಯಾವೈದುಷ್ಯವೂ ಕೈಗೂಡಿತೆಂದು ನಿರಂಜನ ವಂಶರತ್ನಾಕರದಲ್ಲಿ ಹೇಳುತ್ತದೆ. ತಥ್ಯಾಂಶವಿಷ್ಟೇ:– ಇವರು ನಿರಂಜನ ಜಂಗಮಾಧಿಕಾರ ಸ್ವೀಕಾರಕಾಲದಲ್ಲಿ ಹೆಚ್ಚಾಗಿ ವಿದ್ಯಾಭ್ಯಾಸ ಮಾಡಿದವರಲ್ಲ. ಸಿದ್ಧಲಿಂಗೇಶ್ವರರ ಕೃಪೆಗೆ ಪಾತ್ರರಾಗಿ ಅಧಿಕಾರ ಸ್ವೀಕಾರ ಮಾಡಿದಮೇಲೆ ಕ್ರಮೇಣ ಸಕಲಶಾಸ್ತ್ರಪಾರಂಗತರಾದರು ಎಂದು ಭಾವಿಸಬೇಕು.

19 'ಸಿದ್ಧಗಂಗಾ' ಜಲೋದ್ಭವವು ಸಿದ್ಧಲಿಂಗೇಶ್ವರರಿಂದಲೇ ಆಯಿತೆಂದು ಹೇರಂಬ ಕವಿಯು ಹೇಳುತ್ತಾನೆ. ಆದರೆ ಸಿ. ನಂ. ರತ್ನಾಕರ ಗ್ರಂಥದ ಪ್ರಕಾರ ಸಿದ್ಧಗಂಗಾ ಜಲೋದ್ಭವದ ಪವಾಡ ಗೋಸಲಸಿದ್ಧೇಶ್ವರರಿಂದ ಆಯಿತೆಂದು ಹೇಳಲಾಗುತ್ತಿದೆ. ಬಹುಶಃ ಗೋಸಲಸಿದ್ಧೇಶ್ವರರಿಂದಲೇ ಈ ಜಲೋದ್ಭವ ಪವಾಡ ಕ್ರಿ.ಶ. ೧೩೨೫ ರ ಸುಮಾರಿಗೆ ಈ ಸಿದ್ಧಗಂಗಾ ಜಲವು ಪವಿತ್ರ ಜಂಗಮ ಪಾದತೀರ್ಥವೆಂಬ ಕೀರ್ತಿಗೆ ಪಾತ್ರವಾಗಿ, ಜನತೆಯಲ್ಲಿ ಇದರ ಮಹಿಮಾತಿಶಯಗಳು ಭಕ್ತಿಯನ್ನು ಉಂಟುಮಾಡಿದ್ದವೆಂದು ಊಹಿಸಿ ತಿಳಿಯಬಹುದು.

ತಿಗುಳಾರಣ್ಯದಿಂದ 'ವೀರಣಾರ್ಯ' ಎಂಬುವನು ವಿಷರೋಗ ದಿಂದ ಪೀಡಿತನಾಗಿ ಬರುವನು. ಅವನು ಅಲ್ಲಿಂದ ಸಿದ್ಧ ಲಿಂಗ ಶಿವಯೋಗಿಗಳ ಮರೆಹೊಕ್ಕು ತನ್ನ ತಮಿಳು ಭಾಷೆ ಯಿಂದಲೇ 'ಮಹಾರೋಗ ಸುಪರ್ಣನೇ' ನನ್ನ ರೋಗ ವನ್ನು ಪರಿಹರಿಸು ಎಂದು ಕೇಳುವನು. ಸಿದ್ಧಲಿಂಗೇಶ್ವರರು 'ಸಿದ್ಧಗಂಗಾ ಜಲದಿಂದ ಸ್ನಾನಮಾಡು' ಎಂದು ಅವನಿಗೆ ತಿಳಿಸುವರು.[20] ಅದರಂತೆ ವೀರಣಾರ್ಯನು ಸ್ನಾನ ಮಾಡಲು ವಿಷರೋಗ ಪರಿಹಾರವಾಯಿತು. ತನಗೆ ಕನ್ನಡ ಭಾಷೆ ಗೊತ್ತಿಲ್ಲದ್ದರಿಂದ ಸ್ವಾಮಿಯ ಸಿದ್ಧಗಂಗಾ ಜಲವನ್ನು ತಮಿಳು ಭಾಷೆಯಲ್ಲಿಯೇ ಸ್ತೋತ್ರಮಾಡಲು ಪ್ರಾರಂಭಿಸಿದನು.[21] ಅಕ್ಕಪಕ್ಕದಲ್ಲಿದ್ದ ಸ್ವಾಮಿಗಳವರ ಶಿಷ್ಯರೆಲ್ಲರವರಿಗೆ ಈತನ ಭಾಷೆ ತಿಳಿಯುವುದಿಲ್ಲವೆಂದೂ ಈತನಿಗೆ ಕನ್ನಡ ಭಾಷೆ ಬರುವಂತೆಮಾಡಿ ಕನ್ನಡಲ್ಲಿಯೇ ಸ್ತೋತ್ರಮಾಡುವಂತೆ ಕರುಣಿಸಬೇಕೆಂದು ಬೇಡಿಕೊಂಡರು. ರುದ್ರಗಣದ ವಾಕ್ಯವನ್ನು ಕೇಳಿ ಸಿದ್ಧಲಿಂಗೇಶನು ಅವನಿಗೆ ಕನ್ನಡ ಭಾಷೆ ಬರುವಂತೆ ಅನುಗ್ರಹ ದೃಷ್ಟಿ ಬೀರಲು ಅವನಿಗೆ ಕನ್ನಡ ಭಾಷೆ ಬಂದು ಕನ್ನಡದಲ್ಲಿಯೇ ಅವನು ಸ್ತೋತ್ರಮಾಡಲು ಪ್ರಾರಂಭಿಸಿದನು. ಈತನ ಪ್ರಾರ್ಥನೆ ಯನ್ನು ಕೇಳಿ ಸರ್ವರೂ ಆನಂದಗೊಂಡರು. ಮುಂದೆ ಸಿದ್ಧಲಿಂಗೇಶ್ವರರು ಮಠದೊತ್ತಿನಲ್ಲಿಯೇ ಇರುವ ದೇವ ರಾಯಪಟ್ಟಣದಲ್ಲಿ ಒಂದು ಮಡಿಕೆ ಅನ್ನವನ್ನು ೫೦೦ ಜನ ಜಂಗಮರಿಗೆ ಪ್ರಸಾದವಾಗುವ ಹಾಗೆ ಪವಾಡವೆಸ ಗಿದರು.[22] ಅತಿವೃಷ್ಟಿಯನ್ನೂ ನಿಲ್ಲಿಸಿದ ಪವಾಡ ಇಲ್ಲೇ ನಡೆಯಿತು. ಸಿದ್ಧಗಂಗೆಯ ಪಕ್ಕದಲ್ಲಿ ಕೇತಶರಧಿ ( ಈಗಿನ ಕ್ಯಾತಸಂದ್ರ ) ಯಲ್ಲಿ ಮುರಿದ ರಥ ಮೊದಲಿನಂತಾದುದು. ಮತ್ತು ಸಿದ್ಧಲಿಂಗೇಶ್ವರರ ಆಜ್ಞೆಯಿಂದ ಎತ್ತು ಏಳುದಿನ ಉಪವಾಸವಿದ್ದ ಪವಾಡಗಳೂ ನಡೆದವು. ಹೀಗೆ ಶ್ರೀಕ್ಷೇತ್ರದಲ್ಲಿದ್ದು ಸಿದ್ಧಲಿಂಗೇಶ್ವರರು ಅನೇಕ ಪವಾಡಗಳನ್ನು ಮೆರೆದು ಸಂಚಾರ ಕೈಗೊಳ್ಳುತ್ತಾರೆ.

## ಸಿದ್ಧಗಂಗೆಯಿಂದ ಸಿದ್ಧಲಿಂಗೇಶ್ವರರ ಪ್ರಯಾಣ

ಸಿದ್ಧಗಂಗೆಯಿಂದ ತಮ್ಮ ೭೦೧ ಜನ ವಿರತರು ಹಾಗೂ ಮೂರು ಸಾವಿರ ಚರಮೂರ್ತಿಗಳೊಡನೆ ತುಮಕೂರಿಗೆ ಬಂದು ಅಲ್ಲಿಯೂ ಅನೇಕ ಪವಾಡಗಳನ್ನು ಮಾಡಿದ್ದಾರೆ. ಅವುಗಳಲ್ಲಿ ಒಂದೇ ರಾತ್ರಿ ತುಮಕೂರು ಮತ್ತು ( ಕುಣಿಗಲ್ಲು ) ಕಣಿಯಕಲ್ಲುಗಳಲ್ಲಿ ಕಾಣಿಸಿಕೊಂಡ, ಮತ್ತು ತುಮಕೂರಿನ ಹಲಗೆ ಸೆಟ್ಟರ ಮನೆಯಲ್ಲಿ ತುಂಬೆ ಹೂವಿನ ಮಳೆಗರೆಯಿಸಿದ ಪವಾಡಗಳು ಮುಖ್ಯವಾದುವು. ಈ ತುಂಬೆ ಹೂವಿನ ಮಳೆಗರೆಸಿದ ಪವಾಡ ನಡೆದ ಸ್ಥಳದಲ್ಲಿಯೇ ಈಗ ಸಿದ್ಧಲಿಂಗೇಶ್ವರ ದೇವಾಲಯ ನಿರ್ಮಾಣವಾಗಿದೆ ಎಂದು ತಿಳಿದುಬರುತ್ತದೆ. ತುಮಕೂರಿನಿಂದ ನೇರವಾಗಿ ಪ್ರವಾಸ ಕೈಗೊಂಡು ಗೂಳೂರು ( ವೃಷಭಪುರ ) ಹೊನ್ನುಡಿಕೆ, ಹೆಬ್ಬೂರು, ನಾಗಸಂದ್ರ ( ನಾಗಶರಧಿ ), ( ಕಣಿಯಕಲ್ಲು ) ಕುಣಿಗಲ್ಲು ? ಹುಲಿಯೂರು (ಚಿತ್ರಕಾಯಪುರ, ವ್ಯಾಘ್ರಪುರ)[23] ಮುಂತಾದ ಊರುಗಳಲ್ಲಿ ಸಂಚರಿಸಿ ಅನೇಕ ಪವಾಡಗಳನ್ನು ಮೆರೆದು

---

20 (1) ಹೊಸಮಹಿಮೆಯ ಸಿದ್ಧಗಂಗಾ ತೀರ್ಥದ ಬಳಿ। ಯೆಸೆದಿಪ್ಪ ಸಿದ್ಧೇಶನೆಡೆಗೆ। ವಿಷರೋಗಾಸ್ಪತನಾಗಿ ತಿಗುಳಾರಣ್ಯನಿಂದಲು। ಬ್ಬಸಗೊಳುತೋರ್ವನೈತಂದ॥ ಅ. ೧೬. ಪ. ೪ (2) ರೋಗತಿಮಿರ ಮಾರ್ತಾಂಡ ಮಹಾವಿಷ। ರೋಗ ಸುಪರ್ಣನೆಯನ್ನ। ರೋಗವ ಪರಿಹರಿಸೆಂದು ದ್ರಾವಿಡಭಾಷೆ। ಯೂಗಮದಿಂ ಸ್ತುತಿಸಿದ॥೧೯-೬ (3) ವಿಷರೋಗಾಸ್ಪಿತನ ನುಡಿಯ ಕೇಳಿ ವನವಾಸಿ। ಬೆಸಸಿದ ಸಿದ್ಧಗಂಗೆಯೊಳು। ಸುಸರದಿ ನೀನು ಸ್ನಾನವಮಾಡೆ ಭವರೋಗ। ವಿಷದವ ಹುದೆಸುತವಗೆ॥ (4) ಅನಿಮಿಷವಂದ್ಯನ ನುಡಿಗೇಳಿ ವೀರಣಾ। ರ್ಯನು ಘನ ಹರುಷವ ತಾಳಿ। ಮನಸಲಪಿಂದ ಸ್ನಾನವ ಮಾಡೆ ವಿಷರೋಗ। ಕ್ಷಣದೊಳು ಪರಿಹಾರವಾಯ್ತು॥

21 ಈ ಘಟನೆ ಸಿದ್ಧನಂಜೇಶನು (ಕ್ರಿ.ಶ.ಸು. ೧೫೫೦) ತನ್ನ ಗುರುರಾಜ ಚರಿತ್ರೆಯಲ್ಲಿ ಸಂ ೧೩ ರಲ್ಲಿ ಪ ೬೭ ರಿಂದ ೯೫ ರ ವರೆವಿಗೆ ಸಿದ್ಧಲಿಂಗೇಶ್ವರರ ಮಹಿಮಾತಿಶಯವನ್ನು ಹೇಳುವ ಸಂದರ್ಭದಲ್ಲಿ 'ವೀರಯ್ಯನಿಗಿತ್ತ ಕನ್ನಡ ಭಾಷೆಯ' ಎಂದು ಸ್ಪಷ್ಟವಾಗಿ ಹೇಳಿದ್ದಾನೆ. ಆದುದರಿಂದ ತಿಗುಳದೇಶ ಕರ್ನಾಟಕ ದೇಶದಲ್ಲಿ ಕ್ರಿ.ಶ. ೧೫೫೦ ಕ್ಕೂ ಹಿಂದೆಯೇ ಸಿದ್ಧಗಂಗಾ ತೀರ್ಥದ ಮಹಿಮೆ ಪ್ರಚಾರ ಗೊಂಡಿತ್ತೆಂದಾದರೂ ಊಹಿಸಲು ಅನುಮಾನವೇನಿದೆ ?

22 ಈ ಘಟನೆ ಸಿದ್ಧೇಶ್ವರ ಪುರಾಣ ಸಿದ್ಧಲಿಂಗೇಶ್ವರ ಸಾಂಗತ್ಯ, ತೋಂಟದಾರ್ಯ ರಗಳೆ–ಈ ಮೂರು ಗ್ರಂಥಗಳಲ್ಲೂ ಬರುತ್ತದೆ. —ಸಂ ಆರ್.ಸಿ ಹಿರೇಮಠ; ಷ.ಜ್ಞಾ.ಸಾ. ಪೀಠಿಕೆ ಪು. ೫೫ ಮತ್ತು ೬೦.

23 ಹುಲಿಯೂರು ( ಹುಲಿಯೂರು ದುರ್ಗ ) ಹತ್ತಿರದಲ್ಲಿ ದ್ವಿತೀಯ ಸಿದ್ಧಗಂಗೆಯೆಂಬ ಸ್ಥಳವೊಂದಿದೆ. ತೋಂಟದ ಸಿದ್ಧಲಿಂಗಶಿವಯೋಗಿಗಳು ಇಲ್ಲಿಗೆ ದಯಮಾಡಿಸಿದಾಗ ಸಿದ್ಧಗಂಗೆಯ ಹಾಗೆಯೇ ಇಲ್ಲಿಯೂ ಕಲ್ಲುಬಂಡೆಯಲ್ಲಿ ಪಾದಸ್ಪರ್ಶದಿಂದ ತೀರ್ಥಜನನವನ್ನು ಬರಿಸಿದ ಪವಾಡವನ್ನು ಮೆರೆದಿದ್ದಾರೆ. ಅಲ್ಲಿ ಒಂದು ಮಠವನ್ನು ಶಿವಯೋಗಿಗಳು ನಿರ್ಮಿಸಿ ಚರಮೂರ್ತಿಗಳನ್ನು ನೇಮಿಸಿದ ವಿಷಯವನ್ನು ಹೇರಂಬ ಮತ್ತು ವಿರಕ್ತತೋಂಟದಾರ್ಯರು ತಮ್ಮ ಗ್ರಂಥಗಳಲ್ಲಿ ನಿರೂಪಿಸಿದ್ದಾರೆ.

ಕಗ್ಗೆರೆಗೆ ದಯಮಾಡಿಸಿ ನಾಗಿಣೀ ನದಿಯ ತೀರದ ಹೂಗಳಿಂದ ರಮ್ಯವಾಗಿ, ಬಿಲ್ವವನದಿಂದ ಮನೋಹರವಾಗಿ ಶೋಭಿಸುವ, ತೋಟದಲ್ಲಿ ಬೀಡು ಬಿಡುವರು. ಆಊರ ಮುಖ್ಯವಕ್ತಿಯಾದ ನಂಬ್ಯಣ್ಣ ಮತ್ತು ಗಿರಿಗೌಡರೂ ಸಮಸ್ತ ಭಕ್ತರೂ ಶ್ರೀಗಳವರಲ್ಲಿ ತಮ್ಮ ಅನಂತ ಭಕ್ತಿಯನ್ನು ಅರ್ಪಿಸಿದರು. ಇಷ್ಟರಲ್ಲಿ ಕಗ್ಗೆರೆಗೆ ಒಂದು ಘೋರವಿಪತ್ತು ಪ್ರಾಪ್ತವಾಗುವುದು. ರತ್ನಗಿರಿಯ ವಾಲ್ಮೀಕಿ ಕುಲದ ಪಾಳೆಗಾರನು [24] ಸೈನ್ಯಸಮೇತನಾಗಿ ಬಂದು ದಾಳಿಯನ್ನಿಡುವನು. ಊರ ಜನರೆಲ್ಲ ದಿಕ್ಕುಗೆಟ್ಟು ಊರುಬಿಟ್ಟು ಓಡಿಹೋಗಿ ಸೀರಗಲ್ಲು ಅರಸರ ಮೊರೆಹೋಗುವರು. ಈ ದಾಳಿಯ ಅವಾಂತರದಲ್ಲಿ ಜನರು ಶಿವಯೋಗಿಗಳನ್ನು ಮರೆತುಬಿಡುವರು. ನಂಬ್ಯಣ್ಣ ಮೊದಲಾದ ಕಗ್ಗೆರೆಯ ಭಕ್ತರ ಬಿನ್ನಹವನ್ನು ಸ್ವೀಕಾರ ಮಾಡಿದ್ದ ಶ್ರೀಗಳವರು ಮುಂದಕ್ಕೆ ಪ್ರಯಾಣ ಮಾಡುವಂತೆಯೂ ಇರಲಿಲ್ಲ. ಊರಲ್ಲಿ ಭಕ್ತರಾರು ಇಲ್ಲ. ಶಿವಯೋಗಿಗಳು ತಾವು ಕುಳಿತ ಮರದಡಿಂಪಲ್ಲಿಯೇ ಶಿವಯೋಗಾನಂದದಲ್ಲಿ ಮುಳುಗಿ ಸಮಾಧಿಸ್ತರಾಗುವರು. ಶ್ರೀಗಳವರ ದೇಹದ ಸುತ್ತಲೂ ಹುತ್ತಬೆಳೆದು ನಿಲ್ಲುವುದು ಸ್ವಲ್ಪದಿನಗಳಲ್ಲಿ ಊರುಬಿಟ್ಟು ಓಡಿಹೋದ ಜನ ಮರಳಿ ಊರಿಗೆ ಬಂದು ಸ್ವಾಮಿಗಳವರಲ್ಲಿ ಅನಂತ ಭಕ್ತಿ ಪ್ರಾರ್ಥನೆ ಸಲ್ಲಿಸುವರು. ಬಹಿರ್ಮುಖರಾದ ಶಿವಯೋಗಿಗಳು ಅವರ ಪ್ರಾರ್ಥನೆಯ ಮೇರೆಗೆ ಕಗ್ಗೆರೆಯನ್ನು ಪ್ರವೇಶಿಸುವರು. [25] ಭಕ್ತಾದಿಗಳು ಅತಿ ವೈಭವದಿಂದ ಶ್ರೀಗಳವರ ಮೆರೆವಣಿಗೆ ಮಾಡುವರು. ಈ ಹೊತ್ತಿಗಾಗಲೇ ಶಿವಯೋಗಿಗಳವರಿಗೆ ತುಂಬಾವಯಸ್ಸಾದ ಹಾಗೆ ಕಾಣುತ್ತದೆ. ಶಿವಯೋಗಿಗಳವರ ಪಾದ ಪದ್ಮಾರಾಧಕರಲ್ಲೊಬ್ಬನಾದ ಚೆನ್ನವೀರಪ್ಪ ಒಡೆಯರೆಂಬುವರು ಸ್ವಾಮಿಗಳವರಿಗೆ ಒಂದು ಮಠವನ್ನು ಕಟ್ಟಿಸಿಕೊಡುವ ಸತ್ಸಂಕಲ್ಪವುಳ್ಳವರಾಗಿ ತಮ್ಮ ಗುರುಗಳೂ ಸಿದ್ಧಲಿಂಗೇಶ್ವರರ ಪರಮ ಭಕ್ತರೂ ಆದ ಪಟ್ಟದ ಚಿಟ್ಟಗದೇವರು ಎಂಬುವರಲ್ಲಿ ಈ ವಿಷಯವನ್ನು ಬಿನ್ನೈಸಿ ಕೆಲವೊಂದು ಧನವನ್ನು ಅವರಿಗೆ ಒಪ್ಪಿಸುವರು. ಚಿಟ್ಟಗದೇವರು ತಮ್ಮ ಭಕ್ತನ ಭಕ್ತಿಯ ಮೇರೆಗೆ ಎಡೆಯೂರಿನಲ್ಲಿ ಒಂದು ಮಠವನ್ನು ಕಟ್ಟಿಸಿ ಶಾಸನ ಹಾಕಿಸುವರು. [26] ಶ್ರೀ ಶಿವಯೋಗಿಗಳವರು ತಮ್ಮ ಸಂಗಡವೇ ಇದ್ದ ಸಪ್ಪೇದೇವರು ಉಪ್ಪಿನಹಳ್ಳಿಯ ಸ್ವಾಮಿ, ಗುಮ್ಮಳಾಪುರದ ಸಿದ್ಧಲಿಂಗದೇವರು, ಶೀಲವಂತ ದೇವರು ಬೋಳಬಸವಾರ್ಯರೇ ಮೊದಲಾದವರಿಗೆ [27] ಶಿವಯೋಗ ರಹಸ್ಯದ ಅನೇಕ ಮರ್ಮಗಳನ್ನು ತಿಳಿಸಿ. ಲಿಂಗಾಂಗ ಸಾಮರಸ್ಯದ ರೀತಿಯನ್ನು ಅರುಹಿ ಎಡೆಯೂರಿನಲ್ಲಿ ಚಿಟ್ಟಗದೇವರಿಂದ ಕಟ್ಟಿಸಲ್ಪಟ್ಟ ಮಠದಲ್ಲಿ ಲಿಂಗೈಕ್ಯರಾಗುವರು.

(ಮುಂದುವರಿಯುತ್ತದೆ)

---

24 ಸಿ.ವ ರ.ದಲ್ಲಿ ವಾಲ್ಮೀಕಿ ಕುಲದವನಾದ ರತ್ನಗಿರಿಯ ದೊರೆ ಎಂದಿದೆ.

25 ತೋಂಟದ ಸಿದ್ಧಲಿಂಗಶಿವಯೋಗಿಗಳನ್ನು "ಸಿದ್ಧೇಶ" ಎಂದು ಕರೆಯಲಾಗುತ್ತಿದ್ದು, ಅವರ ಕಗ್ಗೆರೆಯ ತೋಟದಲ್ಲಿ ಶಿವಯೋಗ ಸಮಾಧಿಯಲ್ಲಿ ಕುಳಿತ ನಂತರ ತೋಂಟದ ಸಿದ್ಧಲಿಂಗೇಶ್ವರ, ತೋಂಟದಾರ್ಯ–ಇತ್ಯಾದಿ ನಾಮಾಂತರಗಳಿಂದ ಕರೆಯಲಾಗುತ್ತಿದೆ. ತೋಟಪ್ಪ ಮುಂತಾದಿ ಇಡುವ ಹೆಸರುಗಳ ಹಿನ್ನೆಲೆಯೂ ಇದೇ ಆಗಿದೆ.

26 ಟಿಪ್ಪಣಿ 12 ರಲ್ಲಿ ಈ ಶಾಸನದ ವಿಷಯವನ್ನು ಕೊಡಲಾಗಿದೆ.

27 ತೋಂಟದ ಸಿದ್ಧಲಿಂಗ ಶಿವಯೋಗಿಗಳ ಹಿಂದೆ ೭೦೧ ವಿರತರು ೩೦೦೦ ಚರಮೂರ್ತಿಗಳು ಇದ್ದರೆಂದು ಹೇಳಲಾಗುತ್ತಿದೆ ಅವರಲ್ಲಿ ಬಹುಜನರ ಹೆಸರನ್ನು ಚೆನ್ನಬಸವ ಪುರಾಣ ಹೇಳಿದೆ. ಆದರೆ ಅಲ್ಲಿ ಇಂತಿವರ್ ಮೊದಲಾದ ವಿರತರೇಳ್ನೂರ್ವರುಂ ಸತತಂಗೂಡಿ ಷಟ್‌ಸ್ಥಲ ಮಾರ್ಗಮಂ ಧರೆಯೊಳಂತರಿಸಿದಂತೆ ( ಕಾಂ.೫, ಸಂ.೧೦, ಪ.೫೦ ) ಎಂದಿದ್ದಾರೆ. ೭೦೧ ಸಂಖ್ಯೆಯಿಲ್ಲ. ಅವರಲ್ಲಿ ಮುಖ್ಯರಾದವರು,

(1) ಸಿದ್ಧಲಿಂಗೇಶ್ವರಂ ಕಂಬಳಾದೇವರಾ। ಸಿದ್ಧನಂಜೇಶ್ವರಂ ಚೆನ್ನದೇವರ್ ದೊಡ್ಡ. ಸಿದ್ಧಲಿಂಗೇಶ್ವರಂ ಕಂಕಣದೇವರ್ ಆಲಂಬಕರ್ಣದ ದೇವರು॥

ಸಿದ್ಧಮಲ್ಲೇಶ್ವರಂ ಗುಮ್ಮಳಾಪುರದವರ। ಸಿದ್ಧಲಿಂಗೇಶ್ವರಂ ಎಡತೊರೆಯ ಪುರದಗುರು। ಸಿದ್ಧವೀರಣ್ಣೊಡೆಯರೆಸೆವ ಘನಲಿಂಗದೇವರ್ ಚಿಕ್ಕಮಲೇಶನು॥

(2) ಮರಳಸಿದ್ಧೇಶ್ವರಂ ಚಂದ್ರಶೇಖರನೆಸೆವ। ಸುರಗಿಯಾರ್ಯರುಂ ಶಾಂತಮಲ್ಲಿಕಾರ್ಜುನದೇವ। ರಿರದೆ ಬೆಡಗಿನ ಪರ್ವತೇಶ್ವರಂ ಪಟ್ಟಣದ ದೇವರೆಂದಾಜಗುಸಿಯ! ಮರುಳದೇವರ್ ಮಳೆಯ ದೇವರಾ ಬತ್ತಲೆಯ / ಲಿರುವ ದೇವರ್ ಸಂಪಿಗೆಯ ರಾಚವಟ್ಟದೇ। ವರು ಸಪ್ಪಿಯಾರ್ಯರುಪ್ಪಿನ ಹಳ್ಳಿಯಾರ್ಯರೊಪ್ಪುವ ಶೀಲವಂತಾರ್ಯನು.

(3) ಎಸೆವ ಕೊಡಗಿಯ ಹಳ್ಳಿಯಾರ್ಯರುಂ ಜೋಲಿಯಾ। ಬಸವೇಶ್ವರಂ ರಾಜಪಟ್ಟ ಕೋರಿಯ ಸಿದ್ಧ। ಬಸವೇಶ್ವರಂ ಹಿರಣ್ಯಾರ್ಯರಾಶಿವ ಪೂಜೆಯಾರ್ಯರೆಂದೆನಿಪ ಬೋಳ। ಬಸವೇಶನಂದು ಕಿತ್ತಾವರದೆನಿಂದುರಾ। ಬಿಸುವ ಚನ್ನಮಲ್ಲೇಶ್ವರಾದಿ ಪರಿಪರಿಯಲ್ಲಿ। ಪೆಸರ್ವಡೆದ ವಿರತರೇಳ್ನೂರ್ವರಾ ತೋಂಟದ ಯತೀಶನಂ ಕೂಡಿರ್ದರು. ಈ ಪಟ್ಟಿಯಲ್ಲಿ ಅನೇಕ ಪಟ್ಟಾಧ್ಯಕ್ಷ ಸ್ವಾಮಿಗಳವರ ಪರಂಪರೆಯೂ ಇದೆ, ಅನೇಕ ಪಟ್ಟಾಧ್ಯಕ್ಷ ಪರಂಪರೆಯವರು, ವಿರಕ್ತರು, ಶರಣಸಂತತಿಯವರು ಸಿದ್ಧಲಿಂಗೇಶ್ವರರ ಅನುಗ್ರಹ ಪಡೆದವರೇ ಆಗಿದ್ದಾರೆ. ಇದರಿಂದ ಜಂಗಮದ ಸ್ಥಾನಮಾನದ ಕಲ್ಪನೆಯೂ ಆಗುತ್ತದೆ. ಸುತ್ತೂರು ಮಹಾಮಠದ ಘನಲಿಂಗಿದೇವರು ತೋಂಟದ ಸಿದ್ಧಲಿಂಗೇಶ್ವರರಿಂದ ಅನುಗ್ರಹ ಪಡೆದವರೇ ಆಗಿದ್ದಾರೆ. ಇವರದು ಪಟ್ಟಾಧ್ಯಕ್ಷರ ಪೀಠ.

# ದೇಹ ತತ್ವ ಮತ್ತು ಮೋಕ್ಷ

ಮೂಲ— ಕವಿರಾಜ ಪಂಡಿತ ಗೋಪಿನಾಥ್.
ಕನ್ನಡಕ್ಕೆ— ಶ್ರೀ ಶಿವಕುಮಾರಸ್ವಾಮಿಗಳು
ಸರ್ಪಭೂಷಣಮಠ

ಯಾವುದಕ್ಕೆ ದೇಹವೆಂದು ಹೇಳುತ್ತಾರೆ ? ದೇಹದ ಉತ್ಪತ್ತಿ ಹೇಗಾಗುತ್ತದೆ. ದೇಹದ ಧರ್ಮ ಮತ್ತು ಸ್ವರೂಪವೇನು ? ಈ ದೇಹ ಎಷ್ಟು ಪ್ರಕಾಶ ಉಳ್ಳದ್ದಾಗಿದೆ. ? ಇತ್ಯಾದಿ. ಪ್ರಶ್ನೆ ಹಾಗು ಇದೇ ತರಹದ ಅನ್ಯಾನ್ಯ ಪ್ರಶ್ನೆಗಳು ಸಾಮಾನ್ಯವಾಗಿ ಅಧಿಕಾಂಶ. ಜಿಜ್ಞಾಸು ಮಾನವರ ಚಿತ್ತದಲ್ಲಿ ಹುಟ್ಟುವುದೇ ಇಲ್ಲ ಏಕೆಂದರೆ ಪ್ರಾಯಃ ಇದು ಸರ್ವರಿಗೂ ತಿಳಿದ ವಿಷಯವೇ ಆಗಿದೆ ಎಂದು ಎಲ್ಲರೂ ತಿಳಿಯುತ್ತಾರೆ. ಇದಲ್ಲದೆ ಮುಕ್ತಿಯನ್ನು ಹೊಂದಲು ಆತ್ಮ ತತ್ವವನ್ನು ಪಡೆಯುವುದು ಅವಶ್ಯಕವಾಗಿದೆ. ಪರಮಾರ್ಥವನ್ನು ಅಪೇಕ್ಷಿಸುವವರಿಗೆ ಸಂಶೋಧ ಮಾಡಿ ದೇಹ ತತ್ವವನ್ನು ತಿಳಿಯಲು ಪ್ರಯತ್ನಿಸುವುದೆಂದರೆ ಕಾಕದಂತವನ್ನು ಪರೀಕ್ಷಿಸುವಂತೆ ನಿಷ್ಫಲವಾಗಿದೆಂದು ಎಲ್ಲರೂ ತಿಳಿಯುತ್ತಾರೆ. ಪರಂತು ವಾಸ್ತವಿಕವಾಗಿ ಆ ರೀತಿ ಇರುವುದಿಲ್ಲ. ಏಕೆಂದರೆ ಪಾರಮಾರ್ಥಿಕ ಆತ್ಮಜ್ಞಾನ ಪಡೆಯಲು ನಿಜವಾದ ಉತ್ಕಂಠ ಉಳ್ಳವರಿಗೆ ದೇಹ ತತ್ವದ ಬಗೆಗೆ ಅಧಿಕ ಜ್ಞಾನ ಇರಬೇಕಾದುದು ಅವಶ್ಯಕ 'ಶರೀರಮಾದ್ಯಂ ಖಲು ಧರ್ಮ ಸಾಧನಂ' ಇದು ಗಂಭೀರವಾದ ಸತ್ಯವಾಗಿದೆ. ಯಾವರೀತಿಯಿಂದಲಾದರೂ ಜೀವನು ಎಂದಿನಿಂದಲೋ, ಯಾವುದೋ ಅನಾದಿ ಹಾಗು ಅನಿರ್ವಚನೀಯ ಶಕ್ತಿಯ ಪ್ರಭಾವದ ಮೂಲಕ ಸಂಸಾರ ಪಾಶದಿಂದ ಬಂಧಿಸಲ್ಪಟ್ಟಿದ್ದಾನೆಯೋ ಅಂದಿನಿಂದಲೇ ದೇಹಾಧ್ಯಾಸ [ದೇಹವೇ ನಾನು] ದ ಮೂಲಕ ಅವನ ಆತ್ಮ ಬೋಧವು ದೇಹವನ್ನು ಆಶ್ರಯಿಸಿಕೊಂಡೇ ಅಭಿವ್ಯಕ್ತವಾಗುತ್ತದೆ. ವಾಸ್ತವಿಕವಾಗಿ ಜೀವನು ಆತ್ಮವಿಸ್ಮೃತನಾಗಿದ್ದಾನೆ ಮತ್ತು ಅವನ ವಿರುದ್ಧವಾದ ಚೈತನ್ಯ ಮಲಿನ ಹಾಗೂ ಪರಿಚ್ಛಿನ್ನವಾದಂತಾಗಿ ದೇಶ, ಕಾಲ ಮತ್ತು ಕಾರ್ಯಕಾರಣ ಭಾವಗಳ ಅಧೀನ ರೂಪದಲ್ಲಿ ಗೋಚರವಾಗುತ್ತದೆ. ದೇಹವೆಂಬುದು ಯಾವ ವಸ್ತುವೂ ಆಗಿರದೆ ಅನಿತ್ಯ ಹಾಗೂ ನಶ್ವರವಾಗಿದೆ. ಈರೀ... ವಿಚಾರ ಮಾಡಿ ದೇಹಕ್ಕೆ ಸಂಬಂಧಿಸಿದ ವಿಷಯವನ್ನು ದೂರಮಾಡಲು ಅಪೇಕ್ಷಿಸಿದರೂ, ಪ್ರಾಕೃತಿಕ ಶಕ್ತಿಯ ಅವ್ಯರ್ಥ (ಹುಸಿಯಾಗದಿರುವ) ಆಘಾತ ದಿಂ... ಜೀವನಿಗೆ ದೇಹಾತ್ಮಬೋಧವು ಜಾಗ್ರತವಾಗುತ್ತಲೇ ಇರು... ತ್ತದೆ. ಸಾಧಾರಣ ಜೀವನಿಗೆ ಆತ್ಮ ಮತ್ತು ದೇಹ ಎರಡನ್ನೂ ಪರಸ್ಪರವಾಗಿ ಬೇರೆ ಬೇರೆ ಭಾವದಿಂದ ಗ್ರಹಿಸುವುದು ಸಾಧ್ಯವಾಗುವುದಿಲ್ಲ. ಲೋಕಾಯತ ಸಂಪ್ರದಾಯ ಅರ್ಥಾತ್ ಚಾರ್ವಾಕ ಮತಾವಲಂಬಿ ಜಡವಾದಿಗಳು ಸಹ ಈ ವಿಷಯವನ್ನು ಚನ್ನಾಗಿ ಬಲ್ಲರು. ಇಲ್ಲವಾದರೆ ಬೃಹಸ್ಪತಿಗೆ; ಆತನನ್ನು ಕುರಿತ 'ಚೈತನ್ಯ ವಿಶಿಷ್ಟ ಕಾಯಃ ಪುರುಷಃ' ಎಂಬ ಈ ಲಕ್ಷಣ ಸೂತ್ರವನ್ನು ರಚಿಸುವ ಆವಶ್ಯಕತೆಯೇ ಇರುತ್ತಿರಲಿಲ್ಲ. ಇನ್ನೊಂದು ಪಕ್ಷದಲ್ಲಿ ವಿರುದ್ಧ ಆತ್ಮವಾದಿ ದಾರ್ಶನಿಕರಿಗೂ ಸಹ ವಿದೇಹ ಕೈವಲ್ಯವನ್ನು ಪ್ರಮಾ... ಜಿತ-ಗೊಳಿಸುವ ಕಾಲಕ್ಕೆ ನಾನಾ ರೀತಿಯಿಂದ ದೇಹದ ಸತ್ತಾವನ್ನು - ಅಂಗೀಕರಿಸಲು ಬರುವುದಿಲ್ಲ. ವಿದೇಹ ಮುಕ್ತಿರೂಪ ಮೋಕ್ಷವನ್ನು ಸ್ವೀಕಾರ ಮಾಡು... ವವರಿಗೆ ಮೋಚಕ-ಜ್ಞಾನದ ಉದಯವೂ ದೇಹಾವ... ಚ್ಛೇದ ಕಾಲದಲ್ಲಿಯೇ ಆಗುತ್ತದೆ. ಲೌಕಿಕ-ಜ್ಞಾನ... ಉಳ್ಳ ಜೀವನಿಗೆ ಶುದ್ಧ ಜಡ ಅಥವಾ ವಿಶುದ್ಧ ಚೈತನ್ಯ ಇವುಗಳಲ್ಲಿ ಯಾವುದೇ ಒಂದು ಪಕ್ಷವನ್ನು ಹಿಡಿಯು... ವುದು ಸಾಧ್ಯವಿಲ್ಲ. ಪ್ರಸ್ಥಾನ ಭೇದದಿಂದ ಶಾಸ್ತ್ರೀಯ... ಪರಿಭಾಷೆಯ ತಾರತಮ್ಯ ಇದ್ದರೂ ವಸ್ತು ಸ್ಥಿತಿಯು ಪ್ರಾಯಃ ಸರ್ವತ್ರ ಒಂದೇ ರೀತಿಯದಾಗಿ ಕಂಡು ಬರುತ್ತಿದೆ. ಶಾಸ್ತ್ರ ದೃಷ್ಟಿಯಲ್ಲಿ ದೇಹ, ಈ ಶಬ್ದದಿಂದ ಸಾಮಾನ್ಯ ಮನುಷ್ಯರು ತಿಳಿಯುವಂತೆ ಈ ಸ್ಥೂಲ ದೇಹದ ಒಂದು ಪ್ರಕಾರ ಮಾತ್ರವಾಗಿದೆ. ಇದು ಸಾಮಾನ್ಯವಾಗಿ ದೇಹ ತತ್ವದ ಭೌತಿಕ ವಿಕಾರದ ಹೊರತು ಬೇರಾವ ವಸ್ತುವೂ ಅಲ್ಲ. ರಜ ಹಾಗು ವೀರ್ಯದ ಸಂಯೋಗದಿಂದಲೇ ಆಗಿರಲಿ. ಅಥವಾ ಸಂಯೋಗ ಇಲ್ಲದೇ ಆಗಿರಲಿ, ಭೌತಿಕ ಅಣುರಾಶಿಯು ಯಾವುದೇ ಒಂದು ವಿಶಿಷ್ಟ ಸ್ಥಾನದಲ್ಲಿದ್ದುಕೊಂಡು ಬಿಂದು ಭಾವವನ್ನು ಹೊಂದುತ್ತದೋ, ಅದನ್ನೇ ಸ್ಥೂಲ ದೇಹದ ಬೀಜವೆಂದು ತಿಳಿಯಬೇಕು. ಈ ದೇಹ ಬೀಜ ಹೊರಗಿನ ಉಪಾದಾನವನ್ನು ಹೊಂದಿ ಪುಷ್ಟವಾಗುತ್ತದೆ. ಮತ್ತು ಯೋಗ್ಯ ಸಮಯದಲ್ಲಿ ಕಾರ್ಯಕ್ಷಮ...

ರೂಪದಲ್ಲಿ ಅಭಿವ್ಯಕ್ತವಾಗುತ್ತದೆ. ರಜ ಮತ್ತು ವೀರ್ಯವು ರೂಪ ರಕ್ತ ಮತ್ತು ಶುಕ್ಲ, ಬಿಂದುದ್ವಯ ಪ್ರಾಕೃತಿಕ ಅಥವಾ ಆಹಾರ್ಯ-ಕಾಮದ ಪ್ರಭಾವದಿಂದ ವಿಕ್ಷುಬ್ಧವಾಗಿ ಪರಸ್ಪರ ಕೂಡುತ್ತವೆ ಮತ್ತು ಬೀಜರೂಪದಲ್ಲಿ ಆತ್ಮ ಪ್ರಕಾಶ ಮಾಡುತ್ತವೆ. ಎಲ್ಲಿಯವರೆಗೆ ಮನುಷ್ಯನು ಬ್ರಹ್ಮಚರ್ಯ ಸಾಧನೆಯ ಕ್ರಮಿಕ ಉತ್ಕರ್ಷದ ಮೂಲಕ ಸ್ಥಿರರೇತಸ್ ಮತ್ತು ಊರ್ಧ್ವರೇತಾದಿ ಅವಸ್ಥೆಯನ್ನು ಹೊಂದುವುದಿಲ್ಲವೊ ಅಲ್ಲಿಯವರೆಗೆ ಅವನ ಅಧೋರೇತಸ್ ಅವಸ್ಥೆಯು ಸ್ವಾಭಾವಿಕವಾದುದಾಗಿದೆ. ಸಾಮಾನ್ಯವಾಗಿ ಎಲ್ಲ ಮನುಷ್ಯರ ಗತಿಯು ಅಧೋಮುಖ ಅಥವಾ ಹೊರಗೆ ಬರದಹೊರತು ಇರಲಾರದು. ಇದರ ಗತಿವೇಗದಿಂದ ಶಕ್ತ್ಯಾತ್ಮಕ ವ್ಯಾಪಕವಾದ ಬಿಂದು–ಸತ್ತಾ ಬಾಷ್ಪರಾಶಿಯ ಸಂಘಾತದಿಂದ ಉತ್ಪನ್ನವಾದ ಘನೀಭಾವಕ್ಕೆ ಸಮಾನವಾದ, ಘನೀಭಾವವನ್ನೂ ಹೊಂದುತ್ತದೆ. ಮತ್ತು ಕ್ರಮೇಣ ಅಧೋಭೂಮಿಯಲ್ಲಿ ಇಳಿಯುತ್ತ ತೈಜಸ ಹಾಗು ತರಲ ಅವಸ್ಥೆಯನ್ನೂ ಹೊಂದಿ ನಾಭಿಯ ಕೆಳಗಿನ ಪ್ರದೇಶದಲ್ಲಿ ಬರುತ್ತದೆ. ಅಲ್ಲಿಂದ ರೇತೋವಾಹಕ ನಾಡಿಯ ಮೂಲಕ ಮಧ್ಯಾಕರ್ಷಣ ಶಕ್ತಿಯ ನಿಯಾಮಾನುಸಾರ ಹೊರಗೆ ಬರುತ್ತದೆ ಇದೇ ಪ್ರಕೃತ ಕಾಮದ ಸೃಷ್ಟಿಯು ರಹಸ್ಯವಾಗಿದೆ ಪರಂತು ಬ್ರಹ್ಮಚಾರಿ ಮತ್ತು ಕಾಮವನ್ನು ಜಯಿಸಿದವರು, ಸ್ಥೂಲ ಸೃಷ್ಟಿಯ ಕಾರ್ಯದಲ್ಲಿ ಪ್ರವೃತ್ತರಾಗುವ ಅವಶ್ಯಕತೆ ಇದ್ದಲ್ಲಿ ಮೊದಲು ಇಚ್ಛಾಶಕ್ತಿಯ ಮೂಲಕ ಅಥವಾ ಕ್ರಿಯಾಶಕ್ತಿಯ ಕೌಶಲದಿಂದ ಕಾಮವನ್ನೂ ಕ್ಷುಬ್ಧಗೊಳಿಸಬೇಕು. ಏಕೆಂದರೆ ಬಿಂದುವಿನ ಕ್ಷೋಭೆ ಆಗದಲೇ ಯಾವುದೇ ರೀತಿಯ ಗತಿ-ಆಗುವ ಸಂಭವವಿಲ್ಲ. ಚಲನವಾಗದಿದ್ದರೆ ಸೃಷ್ಟಿಯಾಗುವುದು ಆಕಾಶ ಕುಸುಮದಂತಾಗುತ್ತದೆ. ಊರ್ಧ್ವರೇತಸ್ಸುಳ್ಳವರ ನಿಷ್ಕಾಮ ಭಾವವು ಸಾಂಸ್ಥಿತವಾಗಿದೆ. ಆದುದರಿಂದ ಪ್ರಾಕೃತ ಮನುಷ್ಯರಂತೆ ಅವರಲ್ಲಿ ಕಾಮ ಪ್ರವೃತ್ತಿ ಆಗುವ ಸಂಭವವಿಲ್ಲ. ಈ ಸೃಜ್ಯಮಾನ ಕಾಮವನ್ನು ಆಹಾರ್ಯಕಾಮವೆಂದು ಹೇಳುತ್ತಾರೆ.

ಪ್ರಾಚೀನ ಕಾಲದಲ್ಲಿ ಬ್ರಹ್ಮಚರ್ಯ ಸಿದ್ಧಿಯಾದ ನಂತರ ಗೃಹಸ್ಥಾಶ್ರಮದಲ್ಲಿ ಪ್ರವೇಶ ಮಾಡಿದ ಮೇಲೆ ಪ್ರಜಾತಂತುವಿನ ರಕ್ಷಣೆಗಾಗಿ ಈ ರೀತಿಯ ಕಾಮವನ್ನು ಅಹ್ವಾನಿಸಿ ಕಾರ್ಯ ಸಾಧಿಸಬೇಕಾಗುತ್ತಿತ್ತು. ಬಾಹ್ಯ ದೃಷ್ಟಿಯಿಂದ ಎರಡು ಸೃಷ್ಟಿಯ ಭೇದವು ಪ್ರಾಯಃ ಒಂದೇ ರೀತಿಯದಾಗಿದೆ. ಏಕೆಂದರೆ ಎರಡರಲ್ಲೂ ಶುಕ್ಲ ಶೋಣಿತಗಳು ಕೂಡುವುದು ಅವಶ್ಯಕವಾಗಿದೆ. ಇದೇ ಮೈಥುನ ಸೃಷ್ಟಿ ಅಥವಾ ಯೋನಿಜ ದೇಹದ ಉತ್ಪತ್ತಿಯ ವಿವರಣೆ. ಸ್ಥೂಲದೇಹ, ಎಲ್ಲ ಕಡೆಯೂ ಯೋನಿಜವೇ ಆಗಿರಬೇಕೆಂಬ ಯಾವ ನಿಯಮವು ಇರುವುದಿಲ್ಲ. ಅಯೋನಿಜ ದೇಹವೂ ಇರುತ್ತವೆ ಸೀತೆಯಂತಹವಳು ಅಯೋನಿಜಳೇ ಆಗಿದ್ದಳು. ಅದರಂತೆ ಇನ್ನೂ ಅನೇಕ ದೇವತಾ ಋಷಿ ಮುನಿಗಳ ದೇಹವೂ ಅಯೋನಿಜಗಳಾಗಿದ್ದವೆಂದು ತಿಳಿದು ಬರುತ್ತದೆ.

ಶುದ್ಧ ಸಂಕಲ್ಪದಿಂದ ಪರಮಾಣುಗಳು ಅತ್ಪಷ್ಟವಾಗಿ ಉರ್ಧ್ವಾತ್ ಸ್ಥಾನದಲ್ಲಿದ್ದರೆ ದೇಹವನ್ನು ಉತ್ಪಾದಿಸುತ್ತವೆ. ಪ್ರಳಯದ ನಂತರ ಸೃಷ್ಟಿಯ ಆರಂಭದಲ್ಲಿ ನಿರ್ಮಿತವಾದ ದೇಹವು ಒಂದು ರೀತಿಯಲ್ಲಿ ಆಯೋನಿಜ ಸ್ಥೂಲ ದೇಹದ ಉದಾಹರಣೆಗಳೇ ಆಗಿವೆ. ಈ ರೀತಿಯ ದೇಹಗಳು ಸೃಷ್ಟಿ ಕರ್ತನ ಸಂಕಲ್ಪ ವಶ ಪರಮಾಣು ಪುಂಜದ ಸಂಘಟನದಿಂದ ಉತ್ಪನ್ನವಾಗುತ್ತವೆ.

ಊರ್ಧ್ವರೇತಸ್ಸುಳ್ಳವನ ಶಕ್ತಿ ಸ್ರೋತ ಮೇಲಕ್ಕೆ ಹರಿಯುವುದಾದರೂ ಆಹಾರ್ಯ ಕಾಮದ ಪ್ರಭಾವದಿಂದ ಸ್ವಲ್ಪ ಸಮಯಕ್ಕಾಗಿ ಅಧೋಪ್ರವೃತ್ತವಾಗುತ್ತದೆಂಬುದನ್ನು ಮೊದಲೇ ಹೇಳಿದ್ದೇವೆ.

ಕಾಮವನ್ನು ಅಹರಣ ಮಾಡುವುದು ಅಥವಾ ಮಾಡದಿರುವುದಕ್ಕೆ ತನ್ನ ಸ್ವಾತಂತ್ರ್ಯ ಇರುತ್ತದೆಂಬುದು ಉಚಿತವೇ ಆಗಿದೆ ಯಾರು ಕಾಮವನ್ನು ಆವಾಹನ ಮಾಡುವುದಿಲ್ಲವೋ ಅಥವಾ ಯಾರಿಗೆ ಅಹರಣೆ ಮಾಡುವ [ಶಕ್ತಿ] ಸ್ವಾತಂತ್ರ್ಯ ಇಲ್ಲವೊ ಅವರು ಈ ರೀತಿಯ ಮೈಥುನೀ ಸೃಷ್ಟಿಯಲ್ಲಿ ಪ್ರವೃತ್ತರಾಗುವುದಿಲ್ಲ. ಆದರೆ ಶುದ್ಧ ಕಾಮದ ಆಶ್ರಯದಿಂದ, ಕೇವಲ ನಾಭಿ, ಹೃದಯ ಮತ್ತು ಮಸ್ತಕ ಮೊದಲಾದವುಗಳನ್ನು ಬೆರಳುಗಳಿಂದ ಸ್ಪರ್ಶ ಮಾಡುತ್ತಾರೆ ಅಥವಾ ದೇಹದ ಸಂಬಂಧ ಇಲ್ಲದೆಯೂ ಯೋಗಿಗಳು ಗರ್ಭ ಸಂಚಾರ ಮಾಡ

ಬಲ್ಲರು. ಇದೂ ಸಹ ಒಂದು ರೀತಿಯ ರಜೋವೀರ್ಯ ಸಂಘಾತದ ಪ್ರಕ್ರಿಯೆಯೇ ಆಗಿದೆ. ಪರಂತು ಇದು ಪೂರ್ವ ವ ರ್ಣಿ ತ ಕ್ರಿಯೆಗಿಂತ ಅ ತ್ಯಂ ತ ಸೂಕ್ಷ್ಮವಾಗಿದೆ. ಕಾಮಾಶ್ರಯಕ್ಕೆ ಅತ್ಯಂತ ವಿರೋಧಿ ಆದವರು ಈ ಸೂಕ್ಷ್ಮ ಪಕ್ರಿಯೆಯನ್ನು ಅವಲಂಬಿಸಲು ಇಚ್ಛಿಸುವುದಿಲ್ಲ.

ಸ್ಥೂಲ ದೇಹವು ಒಂದೇ ರೀತಿಯದಾಗಿರುವುದಿಲ್ಲವೆಂಬುದು ಪೂ ರ್ವೋ ಕ್ತ ಸಮಾಲೋಚನೆಯಿಂದ ತಿಳಿದು ಬರುವುದು. ನಾವು ಪ್ರತಿದಿನ ಲೌಕಿಕ ವ್ಯವಹಾರದಲ್ಲಿ ನೋಡುವ ಸ್ಥೂಲ ದೇಹವು ಅಧಃ ಸ್ರೋತ-ವೀರ್ಯದಿಂದ ಉತ್ಪನ್ನವಾಗುತ್ತದೆ. ಆದುದರಿಂದ ಸ್ವಾಭಾವಿಕವಾಗಿಯೇ ಅಶುಚಿ ಹಾಗು ಅಶುದ್ಧಗಳಾಗಿವೆ. ಸಾಧನಾ ವಿಶೇಷದ ಪ್ರಭಾವದಿಂದ ಈ ಕಾರಣಾಂಶವನ್ನು ಶರೀದಿಂದ ಶೋಧಿಸದ ಹೊರತು ದೇಹ ಶುದ್ಧವಾಗಲಾರದು. ಎಲ್ಲ ಕಡೆಯೂ ಪ್ರಸಿದ್ಧವಾದ ಈ ಸ್ಥೂಲ ದೇಹವು ಪ್ರಥಮ ಶ್ರೇಣಿಯಲ್ಲಿ ಪರಿಗಣಿತವಾಗಿದೆ. ಊರ್ಧ್ವರೇತಾಜೀವನ ಸಂಕಲ್ಪ ಪ್ರಭಾವದಿಂದ ಆಹಾರ್ಯಕಾಮುದ ಸಂಬಂಧದ ಮೂಲಕ ಅಧೋವೃತ್ತಿ ಉತ್ಪನ್ನವಾಗಿ ಹುಟ್ಟುವ ದೇಹವು ದ್ವಿತೀಯ ಶ್ರೇಣಿಯ ಸ್ಥೂಲ ದೇಹವಾಗಿದೆ. ಇದು ಸ್ವಲ್ಪ ಹೆಚ್ಚು ಶುದ್ಧವಾದುದಾದರೂ ಮಲಿನವಾಗಿದೆ. ಏಕೆಂದರೆ ಇದು (ದೇಹ) ಸಹ ಮೈಥುನದಿಂದ ಉತ್ಪನ್ನವಾಗಿದೆ. ಊರ್ಧ್ವರೇತಾ ಜೀವನ ಸಂಕಲ್ಪದಿಂದ ಶುದ್ಧ ಕಾರ್ಯವನ್ನು ಆಹರಣ ಮಾಡಿ ಅಂಗುಲಿಯ ಮುಖಾಂತರ ಸ್ತ್ರೀಯ ನಾಭಿ, ಹೃದಯ ಮಸ್ತಕ ಮೊದಲಾದವುಗಳ ಸ್ಪರ್ಶದಿಂದ ಉತ್ಪನ್ನವಾದವು. ಸ್ಥೂಲ ದೇಹವು ಮೂರನೆಯ ವರ್ಗದ ಸ್ಥೂಲ ದೇಹವಾಗಿದೆ. ಸ್ಪರ್ಶಮಾಡದೆ ಕೇವಲ ದರ್ಶನ ಹಾಗೂ ಚಿಂತನದ ಮೂಲಕ ಎಲ್ಲಿ ಗರ್ಭ ಸಂಚಾರವಾಗುವುದೊ ಮತ್ತು ಅದರ ಫಲರೂಪವಾಗಿ ಯಾವ ದೇಹ ಉತ್ಪನ್ನವಾಗುವುದೊ ಅದು ನಾಲ್ಕನೆಯ ಶ್ರೇಣಿಯ ಸ್ಥೂಲ ದೇಹ. ಮೂರನೆಯ ಮತ್ತು ನಾಲ್ಕನೆಯ ಸ್ಥೂಲದೇಹಗಳು ಸ್ತ್ರಿ-ಪುರುಷರ ಹೊರಗಿನ ಮಿಥುನ ಭಾವದಿಂದ ಉತ್ಪನ್ನವಾಗದಿರುವ ಕಾರಣ ಶುದ್ಧವಾಗಿವೆ. ಆದರೂ ಮೂರನೆಯದಕ್ಕಿಂತ ನಾಲ್ಕನೆಯ ದೇಹ ಹೆಚ್ಚು ಶುದ್ಧವಾಗಿದೆ. ಹೊರಗಿನ ಸ್ತ್ರೀಪಿಂಡದ ಅಥವಾ ಅವಳ ಗರ್ಭಯಂತ್ರದ ಆವಶ್ಯಕತೆ ಇಲ್ಲದೆ ಉತ್ಪನ್ನವಾದ ದೇಹ ಹೆಚ್ಚು ಪವಿತ್ರವಾದುದಾಗಿದೆ. ಈ ಸೂಕ್ಷ್ಮವಾದ ಯೋನಿ ತತ್ವದ ಆವಶ್ಯಕತೆ ಯಾವಾಗಲೂ ಇರುವುದು ಸಹಜವೇ. ಏಕೆಂದರೆ ಯೋನೇಃ ಶ ರೀ ರಂ, ಈ ನಿಯಮಾನುಸಾರ ಯೋನಿಯ ಸ ಹಾ ಯ ಇ ಲ್ಲ ದೆ ಕೇವಲವಾಗವ್ಯ ಜ್ಯೋತಿ ಸೃಷ್ಟಿಯ ಕಾರ್ಯದಲ್ಲಿ ಪ್ರವೃತವಾಗಲಾರದು. ಯೋಗಿಯ ಸಂಕಲ್ಪ ಪ್ರಭಾವದಿಂದ ಭೌತಿಕ ಉಪಾಧಾನ ರಾಶಿಯು ಆತ್ಮಪ್ರವಾಗಿ ಕೂಡುತ್ತದೆ. ಹಾಗು ದೇಹ ನಿರ್ಮಾಣ ಮಾಡುತ್ತದೆ. ಆ ದೇಹ ಪಂಚಮ ಪ್ರಕಾರದ್ದು ಮತ್ತು ಅತ್ಯಂತ ಶುದ್ಧವಾದುದಾಗಿದೆ. ಬೌದ್ಧ ಹಾಗು ಪಾತಂಜಲ ಗಣದ ನಿರ್ಮಾಣ ದೇಹ ಮತ್ತು ಜೈನರ ಆಹಾರಕ-ದೇಹ ಮೊದಲಾದವುಗಳು ಕೆಲ ವಂಶದಲ್ಲಿ ಇದೇ ರೀತಿಯ ದೇಹಗಳಾಗಿವೆ. ಕೆಲ-ಕೆಲವು ಸ್ಥಾನಗಳಲ್ಲಿ, ಶಾಸ್ತ್ರದೊಳಗೆ ಇದನ್ನು ಔಪಚಾರಿಕ ದೇಹವೆಂದು ವರ್ಣಿಸಲಾಗಿದೆ. ನಿರ್ಮಾಣ ಹಾಗೂ ಔಪಪಾಧಿಕ ದೇಹದಲ್ಲಿ ಪರಸ್ಪರ ಅ ತ್ಯಂ ತ ವೈಲಕ್ಷಣ ಇದ್ದರೂ ಕೆಲವಂಶದಲ್ಲಿ ಸಮಾನತ್ವ ಇರುವುದರಿಂದ ಇವುಗಳನ್ನು ಒಂದು ಶ್ರೇಣಿಯಲ್ಲಿ ಪರಿಗಣಿಸಲಾಗಿದೆ.

ಇನ್ನು ಒಂದು ರೀತಿಯ ದೇಹ ಇದೆ. ಅದು ಈ ಮೊದಲು ಸ್ತ್ರೀಪಿಂಡ ಇಲ್ಲದೆಯೂ ದೇಹ ಉತ್ಪನ್ನವಾಗುವುದೆಂಬುದನ್ನು ಹೇಳಿದ್ದಾಗಿದೆ. ಅ ದೇ ರೀ ತಿ ವಿಶೇಷ ಅವಸ್ಥೆಯಲ್ಲಿ ಪುರುಷ ಪಿಂಡ ಇ ಲ್ಲ ದೆ ಯೂ ದೇಹದ ಉತ್ಪತ್ತಿ ಆಗಬಲ್ಲದು. ಇದೇ ಶಕ್ತಿ ಸಿದ್ಧಾಂತದ ಮೂಲ ಮಾತಾಗಿದೆ. ಮಾನವೀಯ ಭಾಷೆಯಲ್ಲಿ ಈ ತತ್ವವನ್ನು ಪ್ರಕಟ ಮಾಡುವುದಾದರೆ - ಈ ದೇಹ ಅಕ್ಷತ್ ಯೋನಿ- ಕುಮಾರಿಯಿಂದ ಉತ್ಪನ್ನವಾದ ಸಂತಾನದ ದೇಹವಾಗಿದೆ ಎಂದು ಹೇಳಬಹುದು. ಕ್ರೈಸ್ತ ಧರ್ಮ ಸಾಹಿತ್ಯದಲ್ಲಿ ಕೇಳಿ ಬರುವ Tmmaculat conception ಮೊದಲಾದ ಮತವಾದಗಳು ಕೇವಲ ಮತವಾದಗಳೇಅಲ್ಲ ಎಂಬುದು ಪ್ರಸಿದ್ಧವಾಗಿದೆ. ಅವುಗಳ ಗಂಭೀರವಾದ ರಹಸ್ಯ, ಸೂಕ್ಷ್ಮ ದರ್ಶಗಳಾದ ತತ್ವವಿದರ ಹೊರತು ಬೇರೆಯವರಿಗೆ ಬೋಧ ಗ ಮ್ಯ ವ ಲ್ಲ. ಏಸೂಕ್ರಿಸ್ತನ ತಾಯಿ ಮೇರಿ (Virgin Mery) ಕುಮಾರಿ ಆಗಿದ್ದಳು. ಶ್ರೀಕೃಷ್ಣ ಬುದ್ಧ ಮೊದಲಾದ ಅವತಾರೀ ಅಥವಾ ಮಹಾಪುರುಷರ ಆವಿರ್ಭಾವವೂ

ಕೆಲ ಕೆಲವು ಅಂಶದ ಇದರ ಅನುರೂಪವೇ ಆಗಿದೆ. ಸ್ತ್ರೀಯು ಕುಮಾರಿ ಆಗಿಯೂ ಅರ್ಥಾತ್ ವಿಕೃತವಾಗದೆ ಸಂತಾನದ ಜನನ ಆಗಬಹುದು. ಹಿಂದೂತಂತ್ರ ಶಾಸ್ತ್ರದಲ್ಲಿ ಜಗದಂಬಾನನ್ನು ಕುಮಾರಿ ರೂಪದಲ್ಲಿ ವರ್ಣಿಸಿರುವುದು ಇದೇ ತಾತ್ಪರ್ಯವಲ್ಲಿ. ಏಕೆಂದರೆ ಹೀಗಾಗುವುದರಿಂದ ವಿಶ್ವ ಜಗತ್ ಪ್ರಸೂತವಾದರೂ ಅದರ ಸ್ವರೂಪ, ಸ್ಥಿತಿ ಮತ್ತು ನಿರ್ವಿಕಾರ ಭಾವವು ನಷ್ಟವಾಗುವುದಿಲ್ಲ. ಅವಳು ಸಾಧನಾರೂಪದಲ್ಲಿರುವದೂ ನಿಜವೇ, ಇಷ್ಟೇ ಅಲ್ಲ ವಿಧಾನರೂಪದಲ್ಲಿಯೂ ಇದ್ದಾಳೆ. ಉದಾ : (ಧೂಮಾವತಿ) ಆದರೆಇದರ ರಹಸ್ಯ ಸ್ವತಂತ್ರವಾಗಿದೆ.

ಅಯೋನಿಜ ದೇಹ ಸಂಬಂಧವಾಗಿ ಹೇಳಿದ ಮಾತಿನಿಂದ ಆಪಾತತಃ ಯೋನಿಯ ಸಹವಾಸ ಇಲ್ಲದೆ ದೇಹ ಉತ್ಪನ್ನವಾಗುವ ಸಂಬವ ಇದೆ ಎಂಬ ವಿಚಾರ ಬರುತ್ತದೆ. ಪರಂತು ವಾಸ್ತವಿಕವಾಗಿ ಅದಂತು ಇರುವದಿಲ್ಲ 'ಯೋನಿ' ಈ ಶಬ್ದಕ್ಕೆ ಸಾಧಾರಣವಾಗಿ ಪ್ರಚಲಿತವಾದ ಅರ್ಥಇರುವದು. ಸೂಕ್ಷ್ಮ ಅರ್ಥದ ಬಗೆಗೆ ವಿಚಾರ ಮಾಡಿದರೆ ಯಾವದೇರೀತಿಯ ದೇಹವಾದರೂ ಅಯೋನಿಜ ಆಗಲಾರದೆಂಬುದನ್ನು ಸ್ವೀಕಾರಮಾಡಲೇ ಬೇಕಾಗುತ್ತದೆ. ಊರ್ಧ್ವಮುಖವಾದ ತ್ರಿಕೋಣ, ಮತ್ತು ಅಧೋಮುಖವಾದ ತ್ರಿಕೋಣ ಈ ಎರಡುಕೋಣಗಳು ಯೋನಿಯ ರೂಪದಲ್ಲಿವೆ. ಲಿಂಗಜ್ಯೋತಿ ರೂಪವಾದ ಬಿಂದು ಕ್ಷೋಭೆಗೊಂಡು ಗತಿಶೀತವಾಗುತ್ತದೆ ಯೋನಿಯಲ್ಲಿ ಆಕರ್ಷಣ ಶಕ್ತಿ ಉದಯಿಸುತ್ತದೆ. ಒಂದುವೇಳೆ ಬಿಂದು ಅಧೋಗತಿತವಾದರೆ ಅದು ಪ್ರಕೃತ ಅಥವಾ ನಿಮ್ನ ಯೋನಿಯಲ್ಲಿ ಪ್ರವಿಷ್ಟವಾಗಿ ಸೃಷ್ಟಿಯು ವಿಕಾಸವಾಡುತ್ತದೆ. ಪರಂತು ಕ್ಷೋಭೆಗೊಂಡ ಬಿಂದು ಊರ್ಧ್ವಗತಿ ಉಳ್ಳದೂ ಆಗಬಹುದು. ಈ ಅವಸ್ಥೆಯಲ್ಲಿ ಅದರ ಸಮಾವೇಶವು ಅಪ್ರಕೃತ ಅಥವಾ ಊರ್ಧ್ವಯೋನಿಯಲ್ಲಿ ಆಗುತ್ತದೆ. ಪ್ರಕೃತ ಯೋನಿಯಲ್ಲಿ ಆಗುವುದಿಲ್ಲ. ಇದರ ಫಲವಾಗಿ ಅಪ್ರಕೃತ ದಿವ್ಯ ಹಾಗೂ ಶುದ್ಧ ದೇಹದ ಉತ್ಪತ್ತಿ ಆಗುತ್ತದೆ ಇದು ಊರ್ಧ್ವಯೋನಿ ಸ್ಥಾನ ಹಾಗು ಶುದ್ಧಿಯ ಭೇದದಿಂದ ಅನೇಕ ರೀತಿಯದಾಗಿದೆ. ಇದರಲ್ಲಿ ಯಾವದು ಎಲ್ಲಕ್ಕಿಂತ ಮೇಲೆ ಇದೆಯೋ ಅದು ಮನುಷ್ಯನ ಶಿರೋಭಾಗದಲ್ಲಿದೆ. ಅದು ಯೋಗಿಗಳ ಸಮಾಜದಲ್ಲಿ ಬ್ರಹ್ಮಯೋನಿ ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಈ ಯೋನಿಯಿಂದ ಶುದ್ಧವಾದ ಜ್ಞಾನ-ದೇಹದ ಸೃಷ್ಟಿಯಾಗುತ್ತದೆ. ಪರಂತು ಇದೂ ಸಹ ಸ್ಥೂಲದೇಹವೇ ಆಗಿರುವದೆಂಬುದನ್ನು ಬೇರೆ ಹೇಳಬೇಕಿಲ್ಲ.

ಲೌಕಿಕವಾದ ಸ್ಥೂಲದೇಹ (ವೇದಾಂತ-ದರ್ಶನದ ಅನ್ನಮಯ ಕೋಶ) ಸ್ವ. ಪಾಪ್ ಕೌಶಿಕವೆಂಬ ಹೆಸರಿನಿಂದ ಪರಿಚಿತವಾಗಿದೆ. ಇವುಗಳ ರಚನೆಯಲ್ಲಿ ಪಂಚಭೂತಗಳೇ ಉಪಯೋಗವಾಗಿರುತ್ತವೆ ಈ ದೇಹಗಳಿಗೆ ಉಪಾದಾನ ಕಾರಣವು ಒಂದೆ. ಭೂತವೋ ಅಥವಾ ಐದು ಭೂತಗಳೋ ಎಂಬ ವಿಷಯದ ಬಗೆಗೆ ದಾರ್ಶನಿಕರಲ್ಲಿ ಬಹಳ ಮತಭೇದವಿದೆ. ಆದರೆ ಒಂದೇ ಭೂತವನ್ನು ಉಪಾದಾನ ಅಥವಾ ಸಮವಾಯಿ ಕಾರಣವೆಂದು ಗ್ರಹಿಸಿದರೂ ಅನ್ಯಭೂತಗಳನ್ನೂ ಉಪಷ್ಟಂಬಕ ರೂಪದಿಂದ ನಿಮಿತ್ತಕಾರಣವನ್ನಾಗಿ ಸ್ವೀಕಾರ ಮಾಡಬೇಕಾಗುತ್ತದೆ. ಸಾರಾಂಶ—ಈ ದೇಹದಲ್ಲಿ ಎಲ್ಲ ಭೂತಗಳೂ ಇರುತ್ತವೆ. ಪೃಥ್ವಿಕದ ಭೂತಗಳು ಪ್ರಧಾನವಾಗಿ ಇರುವ ಕಾರಣ ಇದು ಪಾರ್ಥಿವ ಆಗಿ ಈ ಹೆಸರಿನಿಂದ ಪ್ರಸಿದ್ಧವಾಗುತ್ತದೆ.

ಈ ದೇಹ ಸಂಬಂಧ ಇಲ್ಲದೆ ಹೇಗೆ ಜೀವನ ಕರ್ತೃತ್ವ ನಿಷ್ಫಲವಾಗಿದೆಯೋ ಅದೇ ರೀತಿ ಭೋಕ್ತೃತ್ವವೂ ನಿಷ್ಫಲವಾಗಿದೆ. ಅರ್ಥಾತ್ ದೇಹಧಾರಣ ಮಾಡಿದ ಜೀವನಿಗೆ ಮಾತ್ರ ಕರ್ಮದಲ್ಲಿ ಅಧಿಕಾರ ಇದೆ ಆದುದರಿಂದ ಅವನೇ ಕರ್ತೃ ಆಗುತ್ತಾನೆ ಮತ್ತು ಭೋಗದ ಆಶ್ರಯ ಅಥವಾ ಭೋಕ್ತಾ. ಅವನೇ ಆಗುತ್ತಾನೆ ಏಕೆಂದರೆ ಈ ದೇಹದ ಅಭಿಮಾನ ಇರುವವರಿಗೆ ಮಾತ್ರ ಒಂದು ಕಡೆ ಕರ್ತೃತ್ವ ಇನ್ನೊಂದು ಕಡೆ ಭೋಕ್ತೃತ್ವ ಪ್ರಕಟವಾಗುತ್ತದೆ. ಕಾರ್ಯದೊಡನೆ ಕಾರಣದ ಅಥವಾ ಹೇತುವಿನೊಡನೆ ಫಲದ ಸಂಬಂಧ ಇರುವಂತೆ, ಕರ್ತೃತ್ವ, ಭೋಕ್ತೃತ್ವಗಳ ಪರಸ್ಪರ ಸಂಬಂಧವೂ ಇರುತ್ತದೆ. ನಾನು ಕರ್ಮ ಮಾಡುವವನು, ಈ ರೀತಿಯ ಕರ್ತೃತ್ವಾಭಿಮಾನ ನಷ್ಟವಾದ ನಂತರ, ಸುಖದುಃಖಗಳನ್ನು ಭೋಗಿಸುವ ಅವಶ್ಯಕತೆ ಇರುವದಿಲ್ಲ. ಏಕಂದರೆ ವಾಸ್ತವಿಕವಾಗಿ ಆ ಕಾಲದಲ್ಲಿ ಕರ್ಮವೇ ಇರುವದಿಲ್ಲ. ಅಭಿಮಾನ ಇಲ್ಲದ ಪುರುಷನಿಗೆ ಕರ್ಮ ಮತ್ತು ಅದರ ಫಲ (ಇದ್ದೂ) ಇಲ್ಲದುದಕ್ಕೆ ಸಮನಾಗಿದೆ. ಆದರೆ ದೇಹಾಭಿಮಾನ ಇರುವವರಿಗೂ ಕರ್ಮವನ್ನು ಮಾಡಲೇಬೇಕಾಗುತ್ತೆ. ಮತ್ತು ಅದಕ್ಕನುಗುಣವಾಗಿ ಫಲವನ್ನು ಅನುಭವಿಸುವುದೂ ಅವಶ್ಯವಾಗಿದೆ. ದೇಹಾಭಿಮಾನಕ್ಕೆ ಮೂಲ

ಕಾರಣ ಅವಿದ್ಯೆ, ಆದುದರಿಂದ ಅವಿದ್ಯೆಯೇ ಕರ್ಮಫಲ ಮಯವಾದ ಸಂಸಾರ ಚಕ್ರವನ್ನು ತಿರುಗಿಸುವುದಾಗಿದೆ. ಜ್ಞಾನೋದಯದಿಂದ ಅವಿದ್ಯೆ ನಿವೃತ್ತವಾಗುತ್ತದೆ. ಆಗ ಅಭಿಮಾನವೂ ನಷ್ಟವಾಗುವದು, ಆದರಿಂದ ಜೀವನು ಕರ್ಮ ಮತ್ತು ಭೋಗದ ಬಂಧನದಿಂದ ಬಿಡುಗಡೆ ಹೊಂದುತ್ತಾನೆ.

ಸ್ಥೂಲದೇಹಕ್ಕೆ ಭೋಗಾಯತನವೆಂದು ಹೇಳುತ್ತಾರೆ. ಏಕೆಂದರೆ ಆ ದೇಹವನ್ನು ಆಶ್ರಯಿಸಿಕೊಂಡೇ ಪೂರ್ವಕರ್ಮದ ಭೋಗ ಸಾಧ್ಯವಾಗುತ್ತತೆ. ಸೂಕ್ಷ್ಮ ಮತ್ತು ಕಾರಣ ದೇಹಗಳು ಭೋಗಾಯತನಗಳಾಗಲಾರವು. ಯಾವ ದೇಹದಿಂದ ಕರ್ಮ ಘಟಿಸುವುದೋ ಅದು ಕರ್ಮದೇಹ ಮತ್ತು ಯಾವದೇಹದಿಂದ ಭೋಗವಾಗುವುದೋ ಅದು ಭೋಗದೇಹ. ಯಾವುದರಿಂದ ಕರ್ಮ ಹಾಗೂ ಭೋಗ ಎರಡೂ ಆಗುತ್ತವೋ ಅದು ಉಭಯಾತ್ಮಕ ದೇಹ ಇವೆಲ್ಲ ಸ್ಥೂಲದೇಹದ ಭೇಧಗಳೇ ಆಗಿವೆಯೆಂಬುದನ್ನು ಬೇರೆ ಹೇಳಬೇಕಿಲ್ಲ.

ಎಂಬತ್ತು ನಾಲ್ಕು ಲಕ್ಷ ಯೋನಿಗಳಲ್ಲಿ ಪರಿಭ್ರಮಣಮಾಡಿ ಜೀವನು ಸ್ಥಾವರ, ಉದ್ಭಜ, ಸ್ವೇದಜ, ಅಂಡಜ ಮೊದಲಾದ ಅವಸ್ಥೆಗಳನ್ನು ಹೊಂದುವದು. ಮತ್ತು ಬಿಡುವದನ್ನು ಮಾಡುತ್ತ ಕ್ರಮೇಣ ಜರಾಯುಜ ಶ್ರೇಣಿಯ ಮೇಲಿನ ಶೀಮೆಯನ್ನು ತಲುಪಿ ದುರ್ಲಭವಾದ ಮನುಷ್ಯ ದೇಹವನ್ನು ಹೊಂದುತ್ತಾನೆ. ಒಂದೊಂದು ವಿಭಾಗದಲ್ಲಿ ನಾನಾರೀತಿಯ ಕ್ರಮೋತ್ಕೃಷ್ಟ ದೇಹ ದೊರೆಯುತ್ತದೆ. ನದಿಯ ಪ್ರವಾಹ ಸ್ವಾಭಾವಿಕವಾಗಿ ಸಮುದ್ರದ ಕಡೆಗೆ ಹರಿಯುವಂತೆ ಪುಣ್ಯಾನ ಸಂಸರ್ಗದಿಂದ ವಿಷುಬ್ಧನಾದ ಪ್ರಕೃತಿಯೊಳಗಣ ಸ್ರೋತವೂ ಪುರುಷನಕಡೆಗೆ ಹರಿಯುತ್ತದೆ. ಆದುದರಿಂದಲೇ ಜೀವನು ಬೀಜರೂಪದಿಂದ ಪ್ರಕೃತಿಯ ಗರ್ಭದಲ್ಲಿ ಅವಿರ್ಭವಿಸಿ ಕ್ರಮೇಣ ಮೇಲಕ್ಕೇರುತ್ತಿರುತ್ತಾನೆ ಮತ್ತು ನಿಧಾನವಾಗಿ ಉತ್ಕೃಷ್ಟತರವಾದ ದೇಹವನ್ನು ಧರಿಸುತ್ತಿರುತ್ತಾನೆ. ಇದು ಮಾಡಿದ ಕರ್ಮಫಲವಾಗಿರದೆ ಪ್ರಾಕೃತಿಕ ಸ್ರೋತದ ಸ್ವಾಭಾವಿಕ ಪರಿಣಾಮದ ಫಲವೇ ಆಗಿದೆ. ಅಹಂಭಾವದ ಸ್ಫೂರ್ತಿ ಆಗದ ವಿನಹ ಜಿವನಿಗೆ ಕರ್ಮಾಧಿಕಾರ ದೊರೆಯುವುದಿಲ್ಲ. ಆದುದರಿಂದ ಮನುಷ್ಯದೇಹವನ್ನು ಹೊಂದುವ ಮೊದಲು ಆಳ ಲಕ್ಷ ದೇಹಗಳಲ್ಲಿ ಸಂಚರಿಸುವುದು ಕೇವಲ ಪ್ರಾಕೃತಿಕ ವ್ಯಾಪಾರವೇ ಆಗಿದೆ. ಅದರ ಮೂಲದಲ್ಲಿ ವ್ಯಕ್ತಿಗತ ಇಚ್ಛೆ ಅಥವಾ ಕರ್ಮದ ಪ್ರೇರಣೆ ಇರುವುದಿಲ್ಲ. ಆದರೆ ಮನುಷ್ಯದೇಹದೊಡನೆ ಸಂಪರ್ಕವಾಗುತ್ತಲೇ ಕರ್ತೃಸ್ವಾಭಿಮಾನ ಉಂಟಾಗುತ್ತದೆ. ಅದುದರಿಂದಲೇ ಕರ್ಮಾಧಿಕಾರದ ಉತ್ಪತ್ತಿ ಹಾಗೂ ಫಲಭೋಗ, ಅವಶ್ಯಕವಾಗುತ್ತದೆ. ಆ ಸಮಯದಲ್ಲಿ ಪ್ರಾಕೃತಿಕ ಸ್ರೋತದ ಪ್ರಭಾವ ಇರುವದಿಲ್ಲ. ಜೀವನು ತಾನು ಮಾಡಿದ ಕರ್ಮದಿಂದ ಊರ್ಧ್ವ ಅಥವಾ ಅಧೋಗತಿಯನ್ನು ಹೊಂದುತ್ತಾನೆ. ಪ್ರಾಕೃತಿಕ ಗತಿಯು ಸರಳ ಹಾಗೂ ಊರ್ಧ್ವಮುಖವುಳ್ಳದುದಾಗಿದೆ. ಆದರೆ ಕರ್ಮದ ಗತಿಯು ವಕ್ರ, ಚಕ್ರಾಕಾರ ಮತ್ತು ಅನಂತ ವೈಚಿತ್ರ್ಯಮಯವಾಗಿದೆ. ಏಕಂದರೆ ಅಭಿಮಾನದ ವಿಕಾಸದಿಂದ ಅನಂತರೀತಿಯ ಲೀಲಾಮಯ ಇಚ್ಛೆಯ ಸ್ಫುರಣವಾಗುತ್ತಿರುತ್ತವೆ. ಈ ಅಭಿಮಾನದ ನಿವೃತ್ತಿಯಿಂದಲೇ ಸ್ವಾಭಾವಿಕವಾದ ಸರಳ ಗತಿಯು ಪ್ರಾರಂಭವಾಗುತ್ತದೆ. ಈ ಸರಳ ಸ್ವಭಾವಗತಿಯನ್ನು, ಪುನಃ ಹೊಂದುವುದಕ್ಕಾಗಿಯೇ ದೀಕ್ಷೆಯನ್ನು ಹೊಂದಿ ಯೋಗ ಮೊದಲಾದ ಸಾಧನೆಯನ್ನು ಅನುಷ್ಠಾನದಲ್ಲಿ ತರುವದು ಅವಶ್ಯಕ.

ಮನುಷ್ಯದೇಹದ ವೈಚಿತ್ರ್ಯವು ಸೂಕ್ಷ್ಮದರ್ಶಿಗಳಾದ ಸಾಧಕರ ಹೊರತು ಬೇರೆಯವರಿಗೆ ತಿಳಿಯುವುದಿಲ್ಲ. ಶಕ್ತಿಯ ಯಂತ್ರದ ಮೂಲಕ ನಿಯಮಿಸಲ್ಪಟ್ಟು ಪ್ರಕಟವಾಗುತ್ತದೆ. ಮುಕ್ತ ಶಕ್ತಿಯೂ ಅವಶ್ಯಕವಾಗಿದೆ ಅದು ಸ್ಫುರಿಸುವುದಿಲ್ಲ. ಅದೇರೀತಿಯಾಗಿ ಪುರುಷನ ಸಂಸರ್ಗವಶದಿಂದ ಚೇತನಶಕ್ತಿ, ಜಡ ಪ್ರಕೃತಿಯ ಗರ್ಭದಲ್ಲಿ ಪ್ರವೇಶಮಾಡಿ ಅದರಿಂದ ಹೊರಹೊರಡುವ ಕಾಲಕ್ಕೆ ಜಡದ ಸತ್ವಾಂಶವನ್ನು ಆಕರ್ಷಣೆಮಾಡಿಕೊಂಡು ಪ್ರಕಟವಾಗುತ್ತದೆ. ಎಣ್ಣೆ ಮೊದಲಾದವುಗಳಿಲ್ಲದೆ ದೀಪ ಪ್ರಕಾಶಿಸದಿರುವಂತೆ ಸತ್ವರಹಿತವಾದ ಚೇತನವೂ ಪ್ರಕಾಶಿಸುವುದಿಲ್ಲ. ಈ ಸತ್ವವು ಜಗತ್ತಿನೊಡನೆ ಸಂಬದ್ಧವಾಗಿದೆ. ಚೇತನ ಶಕ್ತಿಯು ಕ್ರಮೇಣ ಇದನ್ನು ಉದ್ಧಾರಮಾಡಿ ಅದರ ಸಂಸರ್ಗದಮೂಲಕ ತಾನು ಪುಷ್ಟಿಯನ್ನು ಹೊಂದುತ್ತದೆ.

( ಮುಂದುವರಿಯುವುದು )

# ಮರಣಕ್ಕೂ ಮಿಗಿಲು! (ಸಣ್ಣ ಕತೆ)

—ಎನ್. ಎಸ್. ಗದಗಕರ

ಆಸಾಮುದ ರಾಜಧಾನಿ ಗೌಹಾಟಿಯ ದಕ್ಷಿಣಕ್ಕೆ ನೀವು ಪ್ರವಾಸ ಕೈಗೊಂಡಿರೆನ್ನಿರಿ ಆಗ ನಿಮಗೆ ಭಾರತದ ನಿಸರ್ಗದೈಸಿರಿಯೇ ಕಣ್ಣು ಕಟ್ಟುವುದು. ಏನು ಚಿತ್ರಮಯ ಪ್ರದೇಶ! ಗುಡ್ಡ, ಕೊಳ್ಳ, ಬಿದಿರು ಕಾಟಿ, ಹೊಳೆ, ಹಳ್ಳ, ಕೆರೆ, ಪಕ್ಷಿ, ಪ್ರಾಣಿ—ಒಂದೆ ಎರಡೇ? ಎಲ್ಲ ಪ್ರಮಾಣಬದ್ಧವಾಗಿ ಅಲ್ಲಿ ಮನಮೋಹಕವಾಗಿ ನೆಲಸಿವೆ. ಅದು ಪ್ರತಿ ಸ್ವರ್ಗವೇ! ಇಂತಹ ಸಾದನ ವನದಲ್ಲಿಯೇ ನನಗೆ ಭೂತ ಸಾದರ್ಶನವಾದುದು.

ಹಾಗೆಯೇ ನೀವು ದಕ್ಷಿಣಕ್ಕೆ ಕ್ರಮಿಸಿದರೆ ಅರುಣಾಚಲಂ ಎಂಬ ಚಿಕ್ಕ ರೈಲುನಿಲ್ದಾಣ ಹತ್ತುವದು. ಈ ಸ್ಥಳವನ್ನು ತಿರಸ್ಕರಿಸುವಂತೆಯೇ ಏನೊ ರೈಲು ಕೂಡ ಮೂರೇ ನಿಮಿಷ ನಿಲ್ಲುವದು! ಅನಂತರ ಸಿಲೆಹಾರಕ್ಕೆ ಬರುವೆವು. ಅರುಣಾಚಲಂ ಕೂಡ ನೀರಸ ಸ್ಥಳವೆ, ಅಲ್ಲಲ್ಲಿ ಗುಡ್ಡಗಳು, ನಡುವೆ ಸೀಳುದಾರಿ, ಗುಡ್ಡಗಳ ಸುತ್ತಲು 'ಬಾರಾ' ಎಂಬ ಹೆಸರಿನ ಗುಡಿಸಲುಗಳ ಸಮೂಹ. ಅವು ಹೆಚ್ಚಾಗಿ ಬಿದುರಿನದೇ! ಅರುಣಾಚಲದ ದಾರಿಗಳಂತೆ ಜೀವನ ಕೂಡ ಶಿಥಿಲ!

ಅರುಣಾಚಲಂ ಹಾಗೂ ಸುತ್ತುಮುತ್ತಲಿನ ಹಳ್ಳಿಗಳ ಜನರಿಗೆ ನಾನು ಔಷಧ ಕೊಡುತ್ತಿದ್ದೆ. ನನ್ನ ಕುಟುಂಬದಲ್ಲಿಯ ಜನರೆಂದರೆ ನನ್ನ ಹೆಂಡತಿ, ಇಬ್ಬರು ಹುಡುಗರು. ಅವರೆಲ್ಲ ಸುಖಿ, ನನ್ನಂತೆ ಸಾರ್ವಜನಿಕ ಸೇವೆಯಲ್ಲಿ ತಮ್ಮ ಮಾಸದಿಂದ ನಿರತರು.

ಎರಡು ವರ್ಷಗಳ ಹಿಂದಿನ ಮಾತು. ಆ ಜೂನ ತಿಂಗಳಲ್ಲಿ ಎಂದಿನಕ್ಕಿಂತ ಹೆಚ್ಚು ಮಳೆ ಕೆರೆ ಕಾಲುವೆಗಳು ತುಂಬಿ ಹೊರಸೂಸುತ್ತಿದ್ದವು. ಎಷ್ಟಾದರೂ ಮಳೆ ಬಿಡಲೊಲ್ಲದು ಸುಖಕ್ಕೆ ವಿದ್ಯುತ್ ಪೂರೈಕೆಗೆ ಅಡೆತಡೆ ಅಂದು ಇರುಳು ನಾನು ತಡವಾಗಿಯೇ ಮನೆಗೆ ಬಂದೆ. ಉಳಿದ ನೆರೆಹೊರೆಯವರಿಗಿಂತ ನಮ್ಮದು ಒಳ್ಳೆ ಮನೆಯಷ್ಟೆ!

ನನ್ನ ಹೆಂಡತಿ ದೀಪ ಹಚ್ಚಿ ಕೊಠಡಿಯಲ್ಲಿ ಕುಳಿತಿದ್ದಳು ಅ, ಈ ಮಾತನಾಡಿ ನಾನು ಊಟಕ್ಕೆ ಕುಳಿತೆ. ಪ್ರಾರ್ಥನೆಯ ನಂತರ ಮಕ್ಕಳು ಮಲಗಿದವು. ತಾಸಿನ ನಂತರ ನನ್ನ ಹೆಂಡತಿ ತನ್ನ ಊಟವಾದೊಡನೆ ದೀಪ ತೆಗೆದಳು. ಮರುದಿನ ಸೂರ್ಯನ ಹೊಂಬಿಸಿಲನ್ನು ಕಂಡೇವೆಂದು ಆಶಿಸಿ ಮಲಗಿದೆವು.

ಮಳೆಯೇನೊ ಕಡಿಮೆಯಾಗಿತ್ತು, ಆದರೂ ಇನ್ನೂ ಜಿಟಿ ಜಿಟಿ ಹತ್ತಿತ್ತು. ಹಾಸಿಗೆಯಲ್ಲಿ ನಾವಿನ್ನೂ ಹಾಗೇ ಕುಳಿತಿದ್ದೆವು. ಇಡೀ ದಿನ ದಣಿವಾಗಿತ್ತೊ ಏನೊ ನಿದ್ರೆ ಹೇಳಬಾರದು. ಹಾಗೆ ನೋಡಿದರೆ ದಿನ ನಿತ್ಯ ನನಗೆ ಬೇಗನೆ ನಿದ್ರೆ ಆವರಿಸುವದು. ಹೀಗೆಯೇ ಒಂದು ತಾಸು ಗತಿಸಿದ್ದೀತು. ಅಷ್ಟರಲ್ಲಿ ನನ್ನ ಹೆಂಡತಿ ಮನೂ, "ಬಚ್ಚಲ ಮನೆಯಲ್ಲೇನೊ ಗದ್ದಲವಾಗತೊಡಗಿದೆ"—ಎಂದು ಕಿವಿಯಲ್ಲಿ ತನ್ನ ತಕರಾರನ್ನು ನಿವೇದಿಸಿದಳು. ಆದರೇನು? ಹುಳಹುಪ್ಪಡಿಗಳ ಜಿರ್ ಎಂಬ ಸದ್ದು, ಆ ಬಿರುಗಾಳಿ, ಗಿಡದ ಎಲೆಯ ಸಳಸಳ ಸಪ್ಪಳ, ಮಳೆ ಹನಿಯ ಟಪ್‌ಟಪ್ ಧ್ವನಿಯಲ್ಲಿ ಲಾಲಿಸಿದರೂ ವ್ಯರ್ಥವಾಯ್ತು.

ಸೋಮಾ, ಅಲ್ಲಿ ಯಾರೊ ಇರುವರು (ನನ್ನ ಅಜ್ಜಿಯ ಹೆಸರು) ಎಂದು ಆಕೆ ಮತ್ತೆ ಕಿವಿಯಲ್ಲಿ ಉಸುರಿದಳು.

"ಹುಚ್ಚಿ! ಇದೆಲ್ಲ ಹಳವಂತ ಈ ಹವೆಯಲ್ಲಿ ದೆವ್ವ-ಭೂತ ಹೇಗೆ ಬಂದಾವು? ಸುಮ್ಮನೆ ಮಲಗು ಹೋಗು ಎಂದು ನಾನು ಮಾರುತ್ತರಿಸಿದೆ.

ಕೆಲ ಕಾಲ ನಾವು ಸುಮ್ಮನಿದ್ದೆವು. ಅನಂತರ ಮನೂ ಮತ್ತೆ ಕೇಳಿದಳು—"ನೀವು ಬಚ್ಚಲು ಮನೆಯ ಬಾಗಿಲು, ಕಿಟಕಿ ನೆಟ್ಟಗೆ ನೋಡಿದಿರೇನು?"

ಹೂಂ ಚಿಂತೆ ಬೇಡ, ಚಿಲಕ ಭದ್ರವಾಗಿ ಹಾಕಿರುವೆ ಆಯಿತಿಲ್ಲೊ!?

ಇಲ್ಲ, ಸೋಮೂ, ಅಲ್ಲಿ ಯಾರೋ ಇದ್ದಂತೆ ನನಗೆ ಭಾಸ!

ನಿನಗೆ ಸಮಾಧಾನವಾಗಲಿ, ನೋಡಿಯೇ ಬರುವೆ—ಎಂದು ನುಡಿದು ಟಾರ್ಚ್ ತೆಗೆದುಕೊಂಡು ನಡೆದೆ. ಅದನ್ನು ಹಚ್ಚಿದೆ, ಒಂದು ಕ್ಷಣದಲ್ಲಿ ಪಟ್ ಎಂದು ಆರಿತು. ಏನು ಮಾಡಿದರೂ ಹತ್ತಲೊಲ್ಲದು. ಇನ್ನೇನು ಕಪಾಟಿನಲ್ಲಿಯ ಕಡ್ಡಿಪೆಟ್ಟಿಗೆಯನ್ನಾದರೂ ಹುಡುಕಬೇಕೆಂದು ಹೊರಟೆ. ಅದು ಅಲ್ಲಿ ಇರಲಿಲ್ಲ! ಕತ್ತಲಲ್ಲಿ ಹಾಗೇ ಕೈಯಾಡಿಸುವಾಗ ಟೈಂಪೀಸ್ ಉರುಳಿ ಬಿತ್ತು. ಹಿಂದಿನ ದಿನ ನಾನು ಕೀಲಿ ಕೊಡಲು ಮರೆತಿದ್ದೇನೋ ಮಣ್ಣೋ ಅದೂ ನಿಂತಿತ್ತು. ನನ್ನ ಮೈ ಕೂದಲು ನೆಟ್ಟಗಾಯ್ತು, ಹಣೆ ಮುಟ್ಟಿ ನೋಡಿಕೊಂಡೆ ಬೆವರು ಹನಿ!

ಬಳಿಯಲ್ಲಿಯೇ ಮನೂ ನಿಂತಿದ್ದಳು. 'ನೀನೇನು ಕಡ್ಡಿಯ ಪೆಟ್ಟಿಗೆ ತೆಗೆದಿದ್ದಯಾ?' ನಾನು ಕೇಳಿದೆ. ಆಕೆ ಉತ್ತರಿಸಲಿಲ್ಲ. ಆಕೆಯ ಲಕ್ಷವೆಲ್ಲ ಬಚ್ಚಲು ಮನೆಯಲ್ಲಿ ಕೇಂದ್ರೀಕೃತವಾಗಿತ್ತು, ಅತ್ತಲೇ ನಿಟ್ಟಿಸುತ್ತಿದ್ದಳು. ಆಕೆಯನ್ನು ಹಿಂಬಾಲಿಸಿ ಸಾಗಿದೆ. ಸುತ್ತಲು ಕಮಕಾಳು.

ಆಗ ನನಗೆ ಧೈರ್ಯ ಹೇಗೆ ಬಂದಿತೋ ಏನೊ ಈಗ ಹೇಳಲಾರೆ. ಅಂತಃ ಪ್ರೇರಣೆಯಿಂದ ಎಂಬಂತೆ ಬಚ್ಚಲು ಮನೆಯಲ್ಲಿ ಹೋಗಿ ಸಂಶೋಧನೆ ನಡಿಸಬೇಕೆಂದು ನಿರ್ಧರಿಸಿದೆ. ಏನಾಗದಿದ್ದರೂ ಕನಿಷ್ಟ ಪಕ್ಷಕ್ಕೆ ಹೆಂಡತಿಯ ಹೆದರಿಕೆಯಾದರೂ ತಳಕಿತ್ತು ಓಡೀತೆಂದು ಎಣಿಸಿದೆ. ಮನೂವನ್ನು ಕರೆದುಕೊಂಡು ಸಾಹಸಿ ಪ್ರವೃತ್ತಿಗೆ ಮನಸೋತು ಮುಂದುವರಿದೆ. ಆಕೆಗೆ ಮೈಯ್ಯೆಲ್ಲ ಬೆವರು. ಬಚ್ಚಲು ಮನೆಯ ಬಾಗಿಲು ತೆರೆದೊಡನೆಯೇ ಒಂದು ಬಗೆಯ ಚೀತ್ಕಾರ ಹೊರಹೊಮ್ಮಿತು. ಹೆಂಡತಿ ಹೆದರಿ ಕೈ ಕೊಸರಿಕೊಂಡು ಹಿಂದೆಗೆದಳು.

ಆಕೆ ಬಿದ್ದುಗಿದ್ದಾಳೆಂದು ಉಳಿಸಲು ಹೋಗಿ ಬಚ್ಚಲು ಮನೆಯೆಡೆಗೆ ನಾನು ನೋಡಲಿಲ್ಲ. ಮನೂವನ್ನು ಎಬ್ಬಿಸಿ ನೋಡುತ್ತೇನೆ! ಎರಡು ಹಸಿರು ಕಣ್ಣುಗಳು ಕಿಡಿ ಕಿಡಿಯಾಗಿ ನನ್ನನ್ನೇ ನಿರೀಕ್ಷಿಸುತ್ತಿದ್ದವು. ಮೊದ ಮೊದಲು ಬೆಕ್ಕೇ ಇರಬೇಕೆಂದು ಸಂಶಯ ಬಂದಿತು. ಆದರೆ ಆಕೃತಿ ದೊಡ್ಡದು ಮಾಳಿಗೆಯವರೆಗೆ ವ್ಯಾಪಿಸಿತ್ತು ಆ ಪ್ರಾಣಿ. ಭಯಗ್ರಸ್ಥನಾಗಿ ಶಿಲಾಮೂರ್ತಿಯಂತೆ ನಿಂತೆ. ದೇವರೇ ಗ... ಎಂದು ಮೊರೆ ಹೋದೆ.

ಕ್ಷಿಪ್ರದಲ್ಲಿಯೇ ಬಚ್ಚಲು ಮನೆಯ ಬಾಗಿಲು ತೆರೆದಿತು. ಮಳೆಯಲ್ಲಿ ಆ ಆಕೃತಿ ಲೀನವಾಗಿ ಹೋಯಿತು. ಕತ್ತಲೆಗಿಂತ ಕಪ್ಪು ವರ್ಣ ಅದರದು. ಅಕರಾಳ ವಿಕರಾಳ ಅಸ್ಪಷ್ಟ ಆಕೃತಿ. ತಲೆ ತ್ರಿಕೋನಾಕೃತಿ, ಮೊರದಂತ ಕಿವಿಗಳು, ಆನೆಯ ನೆನಪು ತಂದವು. ಅಷ್ಟಕ್ಕೆ ನಾನು ಚೀರಿ ಉಕ್ಕಿನ ಕಪಾಟಿನ ಬಳಿಗೆ ಬಂದೆ. ಈಗ ದೀಪದ ಅವಶ್ಯಕತೆ ಅತಿ ಎನಿಸಿತು. ಈ ಸಲ ಮಾತ್ರ ಬೆಂಕಿ ಪೊಟ್ಟಣ ಕೈಕೊಡಲಿಲ್ಲ. ಸಿಕ್ಕಿತು.

ನಡುಗುವ ಬೆರಳುಗಳಿಂದಲೇ ದೀಪ ಹಚ್ಚಿದೆ. ಹೆಂಡತಿಯ ಬಳಿಗೆ ಹೋದೆ. ಆಕೆ ನರಳುತ್ತ ನೆಲದ ಮೇಲೆ ಅಂಗಾತ ಬಿದ್ದಿದ್ದಳು. ಅರ್ಧ ಮರ್ಧ ಮೂರ್ಛಾವಸ್ಥೆ ಅದು ಎನಿಸಿತು. ಹಾಸಿಗೆಯಬಳಿ ಆಕೆಯನ್ನು ಹೊತ್ತೊಯ್ದು ಶ್ರೀ ರಾಘವೇಂದ್ರ ಸ್ವಾಮಿಯವರ ಸ್ತೋತ್ರದ ಕೊನೆಯ ಪದ್ಯಗಳನ್ನು ಅಂದೆ. ಹೆಂಡತಿಯ ಉಸಿರಾಟ ಜೋರಾದಂತೆ ನನಗೆ ಇನ್ನೊಂದು ಸದ್ದು ಕೇಳಿಸಿತು. ಗಡಿಯಾರದ್ದು ಅದು. ಈ ಮೊದಲೆ ತಟಸ್ಥವಾದದ್ದು ಈಗ ಹೇಗೆ ಸುರುವಾಯಿತೊ ಸಮಸ್ಯೆ!

ನಮ್ಮ ಭಯೋತ್ಪಾದಕ ಅನುಭವದ ಪ್ರತೀಕ ಎಂದರೆ ತೆರೆದ ಬಚ್ಚಲು ಮನೆಯ ಬಾಗಿಲು, ಆ ವಿಷಯವನ್ನೇನು ನಾನು ಹೆಂಡತಿಯೊಡನೆ ಚರ್ಚಿಸಲಿಲ್ಲ. ಆದರೆ ಮನೆಯಲ್ಲಿ ಭೂತ ಸಂಚಾರದ ಅನಾಹುತ ನಡೆದಿದೆ ಎಂದು ಖಚಿತ ಮನವರಿಕೆ ಆಯಿತು. ಇವರ ಇತ್ಯರ್ಥ ಮಾಡಿಯೇ ತೀರಬೇಕೆಂಬ ದೃಢ ಸಂಕಲ್ಪ ಕೈಕೊಂಡೆ ಮನದಲ್ಲಿ!

ರಾತ್ರಿ ಆಯಿತು. ಇನ್ನೂ ಮಳೆ ಬರುತ್ತಲೆ ಇತ್ತು ಹಿಂದಿನ ದಿನದ ಧ್ವನಿ ನಿಂತಿರಲಿಲ್ಲ. ಈ ಸಲ ಮಾತ್ರ ನಾನು ಜಾಗರೂಕನಾಗಿದ್ದೆ. ತಲೆದಿಂಬಿನ

ಕೆಳಗಿನ ಕಡ್ಡಿ ಪೆಟ್ಟಿಗೆ ಹುಡುಕುವಾಗ ನನ್ನ ಪ್ರೀತಿಯ ಸ್ವಾಮಿಯವರ ಫೋಟೊ ಬಿಡಲಿಲ್ಲ. ಧೈರ್ಯ ನುಗ್ಗಿತು. ಹೆಂಡತಿಯೊಡನೆ ಸಾಗಿದೆ. ಕಡ್ಡಿ ಪೆಟ್ಟಿಗೆ ಕಪಾಟಿನಲ್ಲಿ ಇರಲಿಲ್ಲ. ಮೊದಲಿನಂತೆ ಟಾರ್ಚ್ ಹತ್ತಲಿಲ್ಲ. ಗಡಿಯಾರದ ಸದ್ದೂ ಇಲ್ಲ. ಆದರೂ ಧೈರ್ಯ ಕೈಕೊಂಡಿದ್ದಕ್ಕೆ ಕಾರಣ ವೃಂದಾವನಸ್ಥ ಗುರುಕೃಪೆ ಬಚ್ಚಲು ಮನೆಗೆ ಹೋಗಿ ಬಾಗಿಲು ತೆರೆದವು.

ಹಸಿರು ಕಣ್ಣುಗಳು ಮೇಲಿನಿಂದ ನಮ್ಮಿರ್ವರನ್ನು ಕೆಕ್ಕರಿಸಿ ನಿಟ್ಟಿಸುತ್ತಿದ್ದವು. ಈ ಸಲ ನಾವೂ ಚೀರಾಡಲಿಲ್ಲ. ಏನೊ ಒಂದು ಕಪ್ಪು ಬೃಹದಾಕಾರದ ಪ್ರಾಣಿ ( ಗೊರಿಲ್ಲಾ ಮಾಡರಿ ) ಎದುರಿಗಿದೆ ಎಂದು ಮನವರಿಕೆ ಮಾಡಿಕೊಂಡೆವು. ಸ್ವಾಮಿಗಳ ಛಾಯಾಚಿತ್ರ ಕೈಯಲ್ಲಿ ಗಟ್ಟಿಯಾಗಿ ಹಿಡಿದುಕೊಂಡೆವು ಕಣ್ಣು ಮರೆಯಾದವು. ದುಃಖನೀನಾದ ಹೇಳ ಹೆಸರಿಲ್ಲದಾಯ್ತು. ಕತ್ತಲೆಯಲ್ಲಿ ತೇಲಿ ಹೋದವು !

ಮುಂಜಾವು ಎಲ್ಲೆಡೆ ಹೊಂಬಿಸಿಲು ಹರಡಿತು. ನಿಸರ್ಗವು ನಳನಳಿಸ ತೊಡಗಿತು, ಸ್ವಾಮಿಯವರ ಛಾಯಾ ಚಿತ್ರವನ್ನು ಅಡುಗೆಯ ಮನೆಯ ಬಾಗಿಲಿಗೆ ಕಾಯಂ ನೇತು ಹಾಕಿದೆವು. ಇರಳು ಪ್ರಶಾಂತವಾಯಿತು. ನಿಶ್ಚಿಂತೆಯಿಂದ ನಿದ್ರೆ ಹೋದೆವು. ಈ ಭಯೋತ್ಪಾದಕ ಘಟನೆ ಇನ್ನೊಮ್ಮೆ ಸಂಭವಿಸಲಿಲ್ಲ.

ಇಂದಿಗೂ ಆ ಜೂನ್ ತಿಂಗಳ ಮಳೆಗಾಲದ ಘಟನೆ ಭೂತದ್ದೇ ಎಂದು ನನಗೆ, ನನ್ನ ಹೆಂಡತಿಗೆ ನಿಶ್ಚಿತವಾಗಿ ಹೊಳೆದಿದೆ. ನಾವು ಆ ಎರಡು ದಿನ ನೋಡಿದ ಪ್ರಾಣಿ ಯಾವುದು ಎಂದು ಎಷ್ಟು ಧ್ಯಾನಿಸಿದರೂ ತಿಳಿಯದಾಯಿತು. ಘಟನೆ ಎಷ್ಟೇ ಮೈನವಿರೆಬ್ಬಿಸುವಂತಹದಿದ್ದರೂ ಅದು ಮರೆವಿನ ಸಾಮ್ರಾಜ್ಯಕ್ಕೆ ಧಾವಿಸಿದೆ. ಆಧರೆ ಈಶ್ವರನ ಅಸ್ತಿತ್ವ ಕೃಪೆ ಮಾತ್ರ ಅಚ್ಚಳಿಯದೆ ಮನದಲ್ಲಿ ನೆಲಸಿದೆ. ಏನೊ ಮರಣಕ್ಕಿಂತಲೂ ಮಿಗಿಲಾದ ಹೃದಯ ಉದ್ರಾವಕ ಸನ್ನಿವೇಶ ಅಂದಿನದು ನಿಜ. ಹೆಚ್ಚೇನು ?

[ಆಧರಿಸಿದುದು]



# ಶ ಬ ರಿ

(ಲಾವಣಿ ಮಟ್ಟು)

— ಎಂ. ಜಿ. ವೆಂಕಟೇಶಯ್ಯ.

(ರಾಮನು ಕಬಂಧನನ್ನು ಕೊಂದ ಕೂಡಲೆ ಅವನಿಗೆ ಗಂಧರ್ವ ರೂಪವು ಬಂದಿತು-ತರುವಾಯ)

ಕಬಂಧ ಪೇಳಿದ ಮುಂದಿನ ದಾರಿಯ
ದಕ್ಷಿಣ ದಿಕ್ಕಿಗೆ ಪೋಗುವದ ।
ಪಂಪೆಯ ತೀರದಿ ಋಷ್ಯ ಮೂಕದ
ನೆಲಸಿಹ ರವಿಸುತ ಸುಗ್ರೀವ ॥೧॥

ಸುಗ್ರೀವ ರಾಜನು ಸಖ್ಯನು ನಿನಗೆ
ಅತ್ಯಂತ ಶುಭಕರ ನಿಜವಯ್ಯ ।
ಪೋಗುವುದಲ್ಲಿಗೆ ಕಾರ್ಯವ ಸಾಧಿಸೆ
ವಾನರ ನೇಹದ ದೆಶೆಯಿಂದ ॥೨॥

ತೇಜದ ರೂಪವು ಎದ್ದಿತು ಮೆಲ್ಲನೆ
ಗಗನದ ದಿಕ್ಕಿಗೆ ಮಿನುಗುತ್ತಾ ।
ರಾಮ ಲಕ್ಷ್ಮಣರು ಮುಂದಕೆ ನಡೆದರು
ಪಂಪಾ ಸರೋವರದೆಡೆಗಾಗ ॥೩॥

ಸುತ್ತಲೂ ವೃಕ್ಷವು ವಿಧ ವಿಧವಾದ ಬಣ್ಣದ
ಹೂಗಳ ಧರಿಸುತ ನೆಲಿಸಿತ್ತು ।
ಪಿಕಗಳ ತಂಡವು ಮಧ್ಯದಿ ಸೇರುತ
ಹಣ್ಣನು ಕುಕ್ಕುತ ನಗುತಿತ್ತು ॥೪॥

ಮುಂದಕೆ ನಡೆದರು ಸೇರಿದವರು
ಋಷ್ಯಾಶ್ರಮವನು ಮುಟ್ಟಿದರು ।
ಸುತ್ತಲ ಗಾಳಿಯ ಮೂಲಿಕೆ ವೈಭವ
ರಾಮನ ದುಃಖವ ಕುಂದಿಸಿತು ॥೫॥

ಏನಿದು ಅಚ್ಚರಿ ಸೌಮಿತ್ರಿ ಕೇಳಿದ
ಎನ್ನಯ ಮನಕಿದು ಶಾಂತಿಯಿದು ।
ಎಂತೋ ಬರುತ್ತಿದೆ ಪೇಳಲು ಬಾರದು
ವಿಚಿತ್ರ ಸಂಗತಿಯಾದುದಿದು ॥೬॥

ಎನ್ನುತ ನುಡಿಯುತ ರಾಮನು ಕಂಡನು
ಅಬಲೆಯ ವೃದ್ಧೆಯ ಶಬರಿಯನೆ ।
ರಾಮನ ನೋಡುತ ವಿನಯದಿ ನಮಿಸುತ
ಕರೆವಳು ಭಕ್ತಿಯುಲಾಶ್ರಮಕೆ ॥೭॥

ರಾಮಾ ನಿನ್ನನು ನೋಡಿದೆ ಮನದಲಿ
ವರ್ಷದ ಪರಿಯಲಿ ಕಾದಿರುವೆ ।
ವೃದ್ಧಳ ಭಕ್ತಳ ಬೇಡಿಕೆ ಮನ್ನಿಸಿ
ಬರುವುದುನೀವು ನನ್ನೊಡನೆ ॥೮॥

ಮತಂಗ ಋಷಿಗಳು ಎನ್ನಯ ಗುರುಗಳು
ತಿಳಿಸುತ ನಿಮ್ಮಯ ಬರವನ್ನೇ ।
ಸತ್ಯಲೋಕಕೆ ಪೋದರು ಮುನಿಗಳು
ನಾ ಕಾದಿರುವೆನು ನಿಮಗಾಗಿ ॥೯॥

ಮುಖವನು ನೋಡುತ ಮಾತನು ಕೇಳುತ
ಭಕ್ತಪರಾಧೀನನು ರಾಮ ।
ತನ್ನಯಶೋಕವ ಕಷ್ಟವ ಮರೆಯುತ
ವೃದ್ಧಳ ಹಿಂದೆಯೆ ಹೊರವಂಟ ॥೧೦॥

ಭಕ್ತರ ಮೊರೆಯನು ಕೇಳುವ ದೇವನು
ಶಂಕೆಯ ಬಿಟ್ಟು ನಂಬಿರಲ ।
ಸಂಶಯವೆಂಬುದು ಭಕ್ತಿಗೆ ಶತ್ರುವು
ಸುಡರದ ಭಕ್ತಿಯ ಕಿಚ್ಚಿನಲಿ ॥೧೧॥

ನಿಮ್ಮಯ ಭಕ್ತಿಯೆ ದೇವನ ಲೋಕಕೆ
ಮಿಗಿಲದು ಎನ್ನುವ ಕೇಶವನು ।
ನೀವದ ತಿಳಿಯದೆ ಶಿವನನು ದೂಷಿಸಿ
ನರಕದ ಹಾದಿಯ ಹಿಡಿಯುವಿರಿ ॥೧೨॥

ಸಂಕಟ ಬಂದರೆ ಕುಗ್ಗದೆ ಕರೆದರೆ
ಬಂದೆನು ಬಂದೆನು ಎನ್ನುವವ ।
ರಾಮಾ ಕಾಯೋ ಎನ್ನಯ್ಯ ಎನ್ನಲು
ಕ್ಷಣದಲಿ ಪೋಪುದು ಸಂಕಟವು ॥೧೩॥

ಚೀಡತಿಯಿವಳು ಎಂಬುದ ರಾಮನು
ಯೋಚಿಸಿ ಅಲ್ಲಿಯೆ ಬಿಡಲಿಲ್ಲ।
ಭಕ್ತಳು ಇತ್ತಳು ಫಲಗಳ ಮುದದಲಿ
ಎಂಜಲು ಎನ್ನುತ ಬಿಡಲಿಲ್ಲ ॥೧೪॥

ಕಚ್ಚುತ ಫಲಗಳ ರುಚಿಯನು ಕಾಣುತ
ರಾಮನಿಗಿರಲೆಂದಿಡುತಿರಲು।
ಕಚ್ಚಿದ ಫಲಗಳ ದೇವನು ತಿಂದನು
ಸ್ವಾಹಾ ಮಂತ್ರ ಹವಿಸ್ಸಿನಲಿ ॥೧೫॥

ತಿನ್ನುತ ತಿನ್ನುತ ರಾಮನು ಫಲಗಳ
ವೃದ್ಧಳ ಸಂತಸ ಹೆಚ್ಚಾಯ್ತು।
ಫಲಗಳು ಮುಗಿಯುವ ಕಾಲಕೆ ರಾಮನ
ಕೃಪೆಯದು ನಿಚ್ಚದಿ ಹೆಚ್ಚಾಯ್ತು ॥೧೬॥

ಸಂತಸದಿಂದಲಿ ರಾಮನ ಭೋಜನ
ಕಂಡಳು ಪುಣ್ಯದಿ ಶಬರಿಯಲ।
ಅಖಂಡ ರಾಗದಿ ಕಣ್ಣನು ಮುಚ್ಚುತ
ಪೋದಳು ಸಗ್ಗಕೆ ಶಬರಿಯಲ ॥೧೭॥

ಭಕ್ತನು ನೀಡುವ ಫಲವದು ದೇವಗೆ
ಸತತವು ಪ್ರಿಯವದು ಕೇಳಯ್ಯ।
ಪ್ರೀತಿಯ ನೀಡದೆ ಪಣವನು ತೊಡುವಾ
ಮೋಸವು ಆತಗೆ ತುಚ್ಛವದು ॥೧೮॥

ಶರಣನೆ ರಾಮನು ನೀನೇ ಶಬರಿಯು
ಅತಿಥಿಗೆ ಫಲವನು ನೀಡಯ್ಯ।
ಶಬರಿಗೆ ಸಗ್ಗವ ಕೊಟ್ಟಾದೇವನು
ನಿನಗೂ ಕೊಡುವನು ನಂಬಯ್ಯ ॥೧೯॥

# ಶನಿಗ್ರಹ (ವಿಜ್ಞಾನ ವಿಶ್ವ)

**—ಪ. ರಾಮಕೃಷ್ಣ ಶಾಸ್ತ್ರಿ**

ಸೂರ್ಯನಿಂದ ೮೮, ೧೦. ೦೦, ೦೦೦ ಮೈಲು ದೂರದಲ್ಲಿ ಇತರ ಎಲ್ಲಾ ಗ್ರಹಗಳಿಗಿಂತಲೂ ನಿಧಾನವಾಗಿ ಚಲಿಸುತ್ತಿರುವ ಶನಿಗ್ರಹವನ್ನು ಸುಲಭವಾಗಿ ಗುರುತಿಸಬಹುದು. ನಮ್ಮ ಪುರಾಣಗಳ ಪ್ರಕಾರ ಶನಿಯೆಂದರೆ ಜೋತಿಷ್ಕರಿಗೂ ಕವಿಗಳಿಗೂ ಕಂಟಕ. ಜನರಿಗೆ ಪ್ರಾಪ್ತವಾಗುವ ಸಕಲ ದುರಿತಕ್ಲೇಶಗಳಿಗೂ ಅವನೇ ಕಾರಣ. ಪ್ರಾಚೀನ ಗ್ರೀಕ್ ಪುರಾಣಗಳಲ್ಲಿ ಯೂರೇನಸ್ ಗ್ರಹ ಮತ್ತು ವೆಸ್ಟ್ ದೇವತೆಯ ಪ್ರಣಯ ಫಲವಾದ ಶನಿ ಅದೃಷ್ಟಕ್ಕೂ ಕಾಲಕ್ಕೂ ಅಧಿದೈವ. ಸ್ವಭಾವತಃ ಮಂದಗತಿಯುಳ್ಳ ಶನಿಯನ್ನು ಮಂದನೆಂದು ಕರೆದ ಪುರಾಣಗಳು ಅವನಿಗೆ ಒಂಟಿ ಕಾಲೆಂದೂ ಕಾಗೆ ವಾಹನವೆಂದೂ ಹೇಳಿವೆ. ಪಾಶ್ಚಾತ್ಯರಲ್ಲಿ ಶನಿಯನ್ನು ಕುಡುಗೋಲು ಹಿಡಿದ ಮುದುಕನಂತೆ ಚಿತ್ರಿಸುತ್ತಾರೆ.

ಶನಿಗ್ರಹ ಅತ್ಯಂತ ಪ್ರಕಾಶಮಾನವಾಗಿದ್ದರೂ ಅದರ ವರ್ಣ ಸೀಸವನ್ನು ಹೋಲುತ್ತದೆ. ಆತ ಭೂಮಿಗಿಂತಲೂ ಸೂರ್ಯನಿಗೆ ಹತ್ತು ಪಟ್ಟು ದೂರದಲ್ಲಿದ್ದಾನೆ. ಶನಿಯ ಬೃಹತ್ಕಕ್ಷೆಯು ಪೃಥ್ವಿಯ ಕಕ್ಷೆಗಿಂತ ಹತ್ತು ಪಾಲು ಹಿರಿದಾಗಿದೆ. ವ್ಯಾಸ ಪರಿಮಾಣದಲ್ಲಿ ಶನಿಗ್ರಹ ಪೃಥ್ವಿಗಿಂತ ಒಂಬತ್ತೂವರೆಯಷ್ಟು ದೊಡ್ಡದು. ಆದರೆ ಅದು ಗೋಳಾಕೃತಿಯಲ್ಲಿಲ್ಲ. ಧ್ರುವಗಳಲ್ಲಿ ಚಪ್ಪಟೆಯಾಗಿರುತ್ತದೆ. ಎಲ್ಲ ಗ್ರಹಗಳಿಗಿಂತಲೂ ಹೆಚ್ಚಿನದಾಗಿ ಅದರ ಧ್ರುವ ವ್ಯಾಸವು ವಿಷುವದ್ವ್ಯಾಸಕ್ಕಿಂತ ಶೇಕಡ ೧೦ ರಷ್ಟು ಕಡಿಮೆ. ಗಾತ್ರದಲ್ಲಿ ಭೂಮಿಯ ೭೧೯ ಮಡಿ ದೊಡ್ಡದಾದ ಶನಿಯ ಹೊರಮೈ ವಿಸ್ತೀರ್ಣವೂ ೮೫ ಪಾಲು ದೊಡ್ಡದು. ಶನಿಯಲ್ಲಿರುವ ಸಾಂದ್ರತೆಯು ಭೂಮಿಯದರಲ್ಲಿ ೨೮/೧೦೦೦ ಪಾಲು ಮಾತ್ರವೇ ಇದೆ. ಶನಿಯ ಪದಾರ್ಥಗಳ ತೂಕವೂ ಕಡಿಮೆಯಿರುವುದರಿಂದ ಶನಿಯ ಭಾರ ಪೃಥ್ವಿಗಿಂತ ೯೨ ಪಟ್ಟು ಮಾತ್ರವೇ ಅಧಿಕವಾಗಿದೆ.

ಅತ್ಯಂತ ಮಂದವಾಗಿ ಚಲಿಸುವ ಶನಿ, ತನ್ನ ಸುತ್ತಲೂ ತಾನೇ ೧೦ ಘಂಟೆ ೧೫ ನಿಮಿಷಗಳಲ್ಲಿ ಬಲು ಬೇಗನೆ ತಿರುಗಬಲ್ಲನಾದರೂ ಸೂರ್ಯನಿಗೆ ಒಂದು ಸಲ ಪ್ರದಕ್ಷಿಣೆ ಬರಲು ಅವನಿಗೆ ೨೯ ವರುಷ, ೧೬೭ ದಿವಸಗಳು ಬೇಕಾಗುತ್ತವೆ. ಶನಿಯ ಒಂದು ಸಂವತ್ಸರದಲ್ಲಿ ೨೫,೨೧೭ ದಿವಸಗಳಿರುತ್ತವೆ. ಶನಿಯ ಪರಿಭ್ರಮಣಾ

ಕ್ಷದ ವಕ್ರತೆಯು ಪೃಥ್ವಿಯದಕ್ಕಿಂತ ಕೊಂಚ ಹೆಚ್ಚಿರುವಂತೇ ಅವನಲ್ಲಿ ಪ್ರತಿಯೊಂದು ಋತುವೂ ೭ ವರುಷದಷ್ಟು ದೀರ್ಘಾವಧಿಯದಾಗಿದೆ. ಆದರೆ ಶನಿಗ್ರಹವು ಸದಾ ದಟ್ಟ ಮೋಡಗಳಿಂದ ಆಚ್ಛಾದಿತವಾಗಿದೆ. ಸೂರ್ಯನ ಉಗ್ರ ಕಿರಣಗಳ ಪ್ರಖರತೆಯು ಪೃಥ್ವಿಯ ಮೇಲಿನದಕ್ಕಿಂತ ಅಲ್ಲಿ ಸುಮಾರು ೯೦ ಪಾಲು ಕಡಿಮೆ ಇರುವುದರಿಂದ ಕರಗದೆ ಉಳಿದ ಮೋಡಗಳ ಆ ಪದರು ಶನಿಯ ತಾಪವು ಚದುರಿಹೋಗದಂತೆ ಮೇಲ್ಹೈಯನ್ನು ರಕ್ಷಿಸುತ್ತದೆ. ಶನಿ ಇನ್ನೂ ಸೃಷ್ಟಿಗರ್ಭದಲ್ಲಿ ಬೆಳೆಯುತ್ತಿರುವ ಅತ್ಯಂತ ಎಳೆಯ ಗ್ರಹವಾಗಿರುವುದರಿಂದ ಮುಂದೆ ಆ ಮೋಡಗಳ ಪದರೇ ಸಾಗರಗಳಾಗಿ ಯುಗಾಂತರಗಳಲ್ಲಿ ಮಾರ್ಪಡಬಹುದೆಂದು ವಿಜ್ಞಾನಿಗಳು ತರ್ಕಿಸಿದ್ದಾರೆ.

ಆದರೆ ಶನಿಗ್ರಹದಲ್ಲಿ ಅಸಾಮಾನ್ಯವಾದ ಒಂದು ವಿಶೇಷವೂ ಇದೆ. ಶನಿಗ್ರಹದ ವಿಷುವದ್ರೇಖೆಯ ಮೇಲೆ ೧೨,೫೫೦ ಮೈಲುಗಳಷ್ಟು ಎತ್ತರದಲ್ಲಿ ವೃತ್ತಾಕಾರದ ಒಂದು ಚಪ್ಪಟೆಯ ಬಳೆ ಗ್ರಹವನ್ನು ದೀರ್ಘ ವರ್ತುಲಾಕೃತಿಯಲ್ಲಿ ಸುತ್ತು ಹಾಕಿರುತ್ತದೆ. ಬಳೆಯ ಒಂದು ಭಾಗ ಮಾತ್ರ ಶನಿಯ ಮುಂದಿನಿಂದ ಹಾದು ಹೋಗಿರುವುದರಿಂದ ದೂರದರ್ಶಕದಲ್ಲಿ ನೋಡಿದರೆ ಶನಿಯ ಮೇಲೆ ಅದರ ನೆರಳು ಕಾಣುತ್ತದೆ. ಬಳೆಯ ಇನ್ನೊಂದು ಭಾಗ ಶನಿಯ ಹಿಂದೆ ವ್ಯಾಪಿಸಿದೆ. ೬೧ ಮೈಲಿಗಳಷ್ಟು ಅಗಲವಿರುವ ಈ ಬಳೆಯ ವ್ಯಾಸ ೧,೭೬, ೦೮೦ ಮೈಲುಗಳು. ಅದರಲ್ಲಿ ೩ ಭಾಗಗಳು ಸ್ಪಷ್ಟವಾಗಿ ಗೋಚರಿಸುತ್ತವೆ. ಹೊರ ಭಾಗದಲ್ಲಿ ಮಂದ ಪ್ರಕಾಶವಿದ್ದರೆ ಒಳಭಾಗದಲ್ಲಿ ಮಂಕಾದ ಪಾರದರ್ಶಕವಾದ ತೆಳು ಪರದೆ ಹರಡಿದೆ. ಮಧ್ಯಭಾಗದಲ್ಲಿ ಅತ್ಯಂತ ಉಜ್ವಲವಾಗಿ ಹೊಳೆಯುತ್ತದೆ. ಈ ಬಳೆಯು ಇದರಿಂದ ಮೂರು ಬಳೆಗಳು ಜೋಡಿಕೊಂಡಂತೆ ಭಾಸವಾಗುತ್ತದೆ.

ಶನಿಯ ಸುತ್ತಲೂ ಸುತ್ತುತ್ತಿರುವ ಗಾತ್ರದಲ್ಲಿ ಉಲ್ಕೆಯಂತಿರುವ ಕ್ಷುದ್ರ ಉಪಗ್ರಹಗಳ ಸಮೂಹವೇ ಬಳೆಯಾಕಾರದಲ್ಲಿವೆಯೆಂದು ಅಮೆರಿಕದ ಖಗೋಳಶಾಸ್ತ್ರಜ್ಞರು ಊಹಿಸಿದ್ದಾರೆ. ಶನಿಗೆ ತೀರ ಸಮೀಪದಲ್ಲಿರುವ ಅವುಗಳಲ್ಲಿ ಕೆಲವು ತಮ್ಮ ಪರಿಕ್ರಮಣವನ್ನು ೫ ಗಂಟೆಗಳಲ್ಲಿಯೂ ದೂರದಲ್ಲಿರುವವು ೧೨೭ ಘಂಟೆಗಳಲ್ಲಿಯು ಮುಗಿಸುತ್ತವೆ.

ಶನಿಗೆ ೯ ಉಪಗ್ರಹಗಳಿವೆ. ಅವುಗಳಲ್ಲಿ ಮೊದಲನೆಯದಾದ ಮಿಮಸ್‌ನ ವ್ಯಾಸ ೬೦೦ ಮೈಲಿ. ಶನಿಯಿಂದ ೧,೧೭,೦೦೦ ದೂರದಲ್ಲಿರುವ ಅದರ ಪರಿಕ್ರಮಣ ಕಾಲ ೨೨ ಗಂಟೆ ೩೭ ನಿಮಿಷ. ಎರಡನೆಯದು ಎನ್ಸಿಲೆಡಸ್ ೮೦೦ ಮೈಲು ವ್ಯಾಸದಿದ್ದು, ಶನಿಯಿಂದ ೧,೫೭,೦೦೦ ಮೈಲು ದೂರದಲ್ಲಿರುವ ಇದರ ಪರಿಕ್ರಮಣ ಕಾಲ ೨೩ ತಾಸು, ೫೩ ಮಿನಿಟು. ೧,೮೬,೦೦೦ ಮೈಲು ದೂರದಲ್ಲಿರುವ ೧,೨೦೦ ಮೈಲಿ ವ್ಯಾಸವುಳ್ಳ ೩ ನೆಯ ಉಪಗ್ರಹ ಟಿಥಿಸಿಯನ ಪರಿಕ್ರಮ ಕಾಲ ೪೫ ತಾಸು ೧೮ ನಿಮಿಷ.

ಶನಿಯ ಉಳಿದ ಉಪಗ್ರಹಗಳೆಂದರೆ ೨,೩೮,೦೦೦ ಮೈಲು ದೂರದಲ್ಲಿರುವ ಡಯೋನಿ, ೩,೩೨೦೦೦ ಮೈಲು ದೂರದಲ್ಲಿರುವ ರಿಹಿಯ, ೭,೭೧,೦೦೦ ಮೈಲು ದೂರದಲ್ಲಿರುವ ಟೈಟನ್, ೯,೩೪,೦೦೦ ಮೈಲು ದೂರದ ಹೈಪೆರಿಯನ್, ೨೨,೫೫,೦೦೦ ಮೈಲು ದೂರದ ಜಾಫೆಟ್ ಮತ್ತು ೭೯,೯೬,೦೦೦ ಮೈಲು ದೂರದ ಫೋಬಿ.— ಆದುದರಿಂದ ಶನಿಯಲ್ಲಿ ಬೇರೆ ಬೇರೆ ಭಾಗಗಳಲ್ಲಿ ಒಟ್ಟು ೯ ಬೇರೆ ಬೇರೆ ಚಂದ್ರರನ್ನು ಕಾಣಬಹುದು. ನಮಗೆ ಚಾಂದ್ರಮಾಸವು ಒಂದೇ ಬಗೆಯಾದರೆ ಶನಿಗ್ರಹವಾಸಿ (??) ಗಳಿಗೆ ಅದು ಒಂಬತ್ತು ವಿಧ.

ದೂರದರ್ಶಕ ನೋಡಿದಾಗ ಶನಿಯ ಮೇಲೆ ಅಲ್ಲಲ್ಲಿ ಕಳಂಕದಂತೆ ಪ್ರದೇಶಗಳು ಗೋಚರಿಸುತ್ತಾ ಸ್ಥಾನಭೇದದ ಮೂಲಕ ಬದಲಾವಣೆ ಹೊಂದುತ್ತವೆ. ಅವು ಶೀಘ್ರಗಾಮಿಗಳಾದ ಪ್ರವಾಹಗಳಾಗಿರಬೇಕು ಎಂಬುದು ವಿಜ್ಞಾನಿಗಳ ಊಹೆ. ಶನಿಯ ಮೇಲೆ ಉಡ್ಡಾಣಿಸುವುದಾದರೆ ಪೃಥ್ವಿಯ ಈಗಿನ ಯಾವುದೇ ಅಂತರಿಕ್ಷ ಸಂಚಾಲಕಗಳಿಂದಲೂ ಆಗದು. ಭೂಮಿಯಿಂದ ೩೮,೮೦,೦೦,೦೦೦ ಮೈಲು ದೂರದಲ್ಲಿರುವ ಗುರುಗ್ರಹಕ್ಕೆ ಹೋಗಿ, ಅಲ್ಲಿಂದ ೪೦,೦೦,೦೦,೦೦೦ ಮೈಲು ದೂರದಲ್ಲಿರುವ ಶನಿಗ್ರಹಕ್ಕೆ ಹೋಗಿ ಇಳಿಯುವುದೇ ಅಲ್ಲಿಗೆ ಹೋಗುವ ತೀರ ಸರಳವಾದ ದಾರಿ.

ಶನಿಗ್ರಹದ ಬಗೆಗೆ ವಿಜ್ಞಾನಿಗಳು ತಿಳಿದಿರುವುದು ಅತ್ಯಲ್ಪ. ಅವನ ಅಸಾಮಾನ್ಯ ವೈಪರೀತ್ಯಗಳ ಕುರಿತು ಅಧ್ಯಯನ ನಡಿದಿದೆ.

# ಅಮರನಾಥ ಯಾತ್ರೆ

—ಕ್ಯಾಪ್ಟನ್ ಎಂ. ಜಿ. ಕೆ. ಮೂರ್ತಿ

೧೪,೦೦೦ ಅಡಿ ಎತ್ತರದಲ್ಲಿರುವ ಅಮರನಾಥ ಗುಹಾಂತರ್ದೇವಾಲಯವು ಕೇದಾರನಾಥ, ಬದರೀನಾಥ, ಕೈಲಾಸಗಳಂತೆ ಪವಿತ್ರವೆನಿಸಿರುವ ಬಹು ಮುಖ್ಯ ಯಾತ್ರಾ ಕ್ಷೇತ್ರ. ಪ್ರತಿ ವರ್ಷವೂ ಜುಲೈ ಅಥವಾ ಆಗಸ್ಟ್ ತಿಂಗಳಿನಲ್ಲಿ ಶ್ರಾವಣ ಪೌರ್ಣಿಮಿ "ರಕ್ಷಾ ಬಂಧನ್" ದಿನ ಅಮರೇಶ್ವರನ ದರ್ಶನಕ್ಕಾಗಿ ಭಾರತದ ನಾನಾ ಪ್ರಾಂತಗಳಿಂದ ಸಾವಿರಾರು ಮಂದಿ ಯಾತ್ರಿಕರು ಪ್ರಯಾಣಮಾಡುತ್ತಾರೆ. ದೇಶ ವಿದೇಶಗಳಿಂದ ಕಾಶ್ಮೀರಕ್ಕೆ ಹೋಗುವ ಅಸಂಖ್ಯಾತ ದೇಶಸಂಚಾರಿಗಳಲ್ಲಿ ಅನೇಕರು ಅಮರನಾಥ ಪರ್ವತದ ಅನುಪಮ ನೈಸರ್ಗಿಕ ಸೌಂದರ್ಯವನ್ನು ಆಸ್ವಾದಿಸಲು ಅಲ್ಲಿಗೆ ಹೋಗುತ್ತಾರೆ. ಮಾರ್ಗದ ಅನುಸಂಕಟಗಳನ್ನೂ ಪ್ರಯಾಸವನ್ನೂ ಎದುರಿಸಲೇಬೇಕೆಂಬ ಇಚ್ಛೆಯಿಂದಲೇ ಸಾಹಸಿಗಳೂ, ಪರ್ವತಾರೋಹಿಗಳೂ ಅಲ್ಲಿಗೆ ಹೋಗುತ್ತಾರೆ.

ಲಿಡ್ಡಾರ್ ನದಿಯ ತೀರದಲ್ಲಿರುವ ಪೇಹಲ್‌ಗಾಂ ಕ್ಷೇತ್ರದಿಂದ ಈ ಯಾತ್ರೆಯು ಆರಂಭವಾಗುತ್ತದೆ. ಈ ಕ್ಷೇತ್ರವು ಕಾಶ್ಮೀರದಲ್ಲಿ ಶ್ರೀ ನಗರದ ಪೂರ್ವ ದಿಕ್ಕಿನಲ್ಲಿ ೬೦ ಮೈಲಿ ದೂರದಲ್ಲಿದೆ. ಅಲ್ಲಿಯವರೆಗೂ ಮೋಟಾರ್ ರಸ್ತೆ ಇದೆ. ನದಿಯ ಒಂದು ಪಕ್ಕದಲ್ಲಿ ಕೋಲಾಹಾಯ್ ಎಂಬ ಹಿಮನದಿಯು ಎತ್ತರದಲ್ಲಿ ಕಾಣಿಸುತ್ತದೆ. ಇನ್ನೊಂದು ಪಕ್ಕದಲ್ಲಿ ಬಹು ವಿಶಾಲವಾದ ಹುಲ್ಲು ಬೆಳೆದ ಭೂಮಿ ಚಾಚಿಕೊಂಡಿದೆ. ಇಲ್ಲಿ ಯಾತ್ರಿಕರು ತಮ್ಮ ಡೇರೆಗಳಲ್ಲಿ ಬಿಡಾರ ಹೂಡುತ್ತಾರೆ. ಭಾರತದ ನಾನಾ ಪ್ರಾಂತಗಳಿಂದ, ನಾನಾ ಭಾಷೆಗಳನ್ನಾಡುವ, ವಿವಿಧ ಸಂಪ್ರದಾಯಗಳ ಯಾತ್ರಿಕರು ಸೇರುತ್ತಾರೆ. ಸಾಧುಗಳಿರುವ ಡೇರೆಗಳ ಮುಂದೆ ಕೇಸರಿಬಣ್ಣದ ಬಾವುಟಗಳಿವೆ. ಶ್ರೀಮದಾಚಾರ್ಯರ (ಶಂಕರ ಭಗವತ್ಪಾದರ) ಪವಿತ್ರ ಲಾಂಛನವಾದ "ಛಡಿ" ಎಂಬ ಬೆಳ್ಳಿಯ ಬೆತ್ತವನ್ನು ಒಯ್ಯುವ ಮುಖ್ಯ ಅರ್ಚಕನು ಪ್ರತ್ಯೇಕ ಡೇರೆಯಲ್ಲಿರುತ್ತಾನೆ. ಅವನ ಮುಂದೆ ನಡೆದು ಹೋಗಲು ಯಾವ ಯಾತ್ರಿಕನಿಗೂ ಅವಕಾಶ ಕೊಡುವುದಿಲ್ಲ.

ಪೆಹಲ್‌ಗಾಂನಿಂದ ಅಮರನಾಥ ಕ್ಷೇತ್ರಕ್ಕೆ ೩೫ ಮೈಲಿ ದೂರ. ರಸ್ತೆಯೇ ಇಲ್ಲ, ಕಾಲುದಾರಿ, ಬಹು ಕಠಿಣ ಮಾರ್ಗ, ಏರುತ್ತಾ ಏರುತ್ತಾ ಹೋಗತ್ತದೆ. ಅದನ್ನು ನಡೆದುಕೊಂಡೋ, ಕುದುರೆ ತಟ್ಟಿನ ಮೇಲೋ ಅಥವಾ ಬೋಯಿಗಳು ಹೊತ್ತ ಡೋಲಿಯಲ್ಲಿಯೋ ಹೋಗಬೇಕು. "ಅಮರನಾಥಕೀ ಜೈ", "ಹರಹರ ಭೋಲಾನಾಥ", "ಶಂಭೋ ಶಂಕರ ಮಹಾದೇವ" ಎಂಬ ಜಯಘೋಷವು ಪೆಹಲ್‌ಗಾಂನಿಂದ ಹೊರಟ ಯಾತ್ರಿಕರ ಸಮೂಹದಿಂದ ಹೊರಟು ಗಿರಿಕಂದರಗಳಲ್ಲಿ ಪ್ರತಿಧ್ವನಿಸುತ್ತದೆ. ರುದ್ರಾಕ್ಷಿಹಾರಗಳನ್ನು ಧರಿಸಿ, ಬೆಳ್ಳಿಯ ಬೆತ್ತವನ್ನು ಮೇಲಕ್ಕೆ ಎತ್ತಿ ಹಿಡಿದ ಮಹಂತರು ಮುಂದೆ ನಡೆಯುತ್ತಾರೆ. ಧೂಪದ ಸುಗಂಧವು ಸುತ್ತಲೂ ಹರಡುತ್ತದೆ. ಶಂಖ, ಜಾಗಟೆ, **ಭೇರಿ, ತಮಟೆ**, ಡಮರುಗಳ ನಿನಾದ, ವೇದಮಂತ್ರಗಳ **ಘೋಷಣೆ**, ಹಿಂದೆ ತ್ರಿಶೂಲವನ್ನು ಹಿಡಿದ ಸಾಧುಗಳು, ಜಟಾಧಾರಿಗಳಾದ ಅವಧೂತರು, ಮೌನಿಗಳು, **ಕಾವಿ** ನಿಲುವಂಗಿಯ ಪರಿವ್ರಾಜಕರು, ಯೋಗಾಭ್ಯಾಸದ ಪರಮಹಂಸರು, ಸನ್ಯಾಸಿಗಳು, ಭಕ್ತರು, ಸಂತರು ಅವರ ಹಿಂದೆ ಇತರ ಯಾತ್ರಿಕರ ತಂಡ ಶಸ್ತ್ರಧಾರಿಗಳಾದ ಸೈನಿಕರು.

ಕಾಲುದಾರಿಯು ಲಿಡ್ಡಾರ್ ನದಿಯ ಪಕ್ಕದಲ್ಲಿ ದಟ್ಟವಾಗಿ ಬೆಳೆದಿರುವ ಮರಗಳ ಮಧ್ಯೆ ಏರುತ್ತಾ ಹೋಗುತ್ತದೆ. ಚಿತ್ರವಿಚಿತ್ರ ಬಣ್ಣಗಳ ಹೂಗಳು ಪುಷ್ಕಳವಾಗಿ ಬೆಳೆದಿವೆ. ಎಂಟು ಮೈಲಿಗಳ ದೂರದಲ್ಲಿ ಚಂದನವಾಡಿ ಎಂಬ ಊರು ಸಿಗುತ್ತದೆ. ಪರ್ವತಗಳ ಇಳುಕಲುಗಳೂ, ಶಿಖರಗಳ ಮೇಲೆ ಕಲಾಬತ್ತುಗಳಂತಿರುವ ಹಿಮದ ಪಟ್ಟಿಗಳೂ ಮುಳುಗುವ ಸೂರ್ಯನ ಕೆಂಪು ಹೊಂಬಣ್ಣದ ಕಿರಣಗಳಿಂದ ಪ್ರಕಾಶಿಸುವುದು ಮನಮೋಹಕ ದೃಶ್ಯ. ಪರ್ವತಗಳ ಎತ್ತರದಿಂದ ನೋಡಿದರೆ ಕೆಳಗೆ ಪ್ರಪಾತದಲ್ಲಿ ಮರಗಳು ರಾಶಿರಾಶಿಗಳಲ್ಲಿ ಕಾಣುತ್ತವೆ. ಇಲ್ಲಿನ ವೈಶಿಷ್ಟ್ಯವೇನೆಂದರೆ, ನಿಸರ್ಗವು ನಿರ್ಮಿ

ಸಿದ ಒಂದು ಮಂಜುಗಡ್ಡೆ ಸೇತುವೆ; ಇದೊಂದು ಪ್ರಕೃತಿಯ ಸೊಬಗು, ಲಿಡ್ಡಾರ್ ನದಿಯು ಬಹು ವೇಗ ದಿಂದ ಈ ಸೇತುವೆಯ ಕೆಳಗೆ ಹರಿದುಹೋಗುತ್ತದೆ. ಯಾತ್ರಿಕರು ದಣಿದಿರುವುದರಿಂದಲೂ, ಮುಂದೆ ಮಾರ್ಗವು ಇನ್ನೂ ಹೆಚ್ಚು ಕಠಿಣವಾಗಿರುವುದರಿಂದಲೂ ಎಲ್ಲರೂ ವಿಶ್ರಾಂತಿಗಾಗಿ ರಾತ್ರಿ ಚಂದನವಾಡಿಯಲ್ಲಿ ನಿಲ್ಲುತ್ತಾರೆ.

ಮಾರನೆ ದಿನ ಬೆಳಿಗ್ಗೆ ಚಂದನವಾಡಿಯಿಂದ ಹೊರಟರೆ ಎರಡು ಮೈಲಿ ದೂರ ಪಿಸ್ಸೂಘಾಟಿಯೆಂಬ ಏರನ್ನು ಬಹು ಪ್ರಯಾಸದಿಂದ ಹತ್ತಬೇಕು. ಇದು ಪರ್ವತದ ಪಕ್ಕದಲ್ಲಿ ಏರಿರುವ ಬಹು ಕಡಿದಾದ ಪ್ರಪಾತ. ಆಡ ಗಳು ಹೋಗಲು ಮಾರ್ಗ. ಇದು ೯೦೦೦ ಅಡಿ ಎತ್ತರದಿಂದ ೧೧,೦೦೦ ಅಡಿ ಎತ್ತರಕ್ಕೆ ಏರುವ ಪ್ರಪಾತ ದಲ್ಲಿದೆ. ಪಿಸ್ಸೂಘಾಟಿಗೆ ಹಿಂದಿನ ಕಾಲದಲ್ಲಿ ಪೌಷ್ಯಶಿ ಪರ್ವತವೆಂದು ಹೆಸರಿತ್ತು. ಬಿಸಿಲಿನಲ್ಲಿ ಆಶ್ರಯ ಕೊಡಲು ಮರಗಳೇ ಇಲ್ಲ. ಬೆಟ್ಟದ ಮೇಲೆ ದೊಡ್ಡ ತಪ್ಪಲು, ಅಲ್ಲಲ್ಲಿ ಭೋಜಪತ್ರ ಮರಗಳಿವೆ. ರಾಕ್ಷಸ ಗಾತ್ರದ ಬಂಡೆಗಳು ಹರಡಿಕೊಂಡಿವೆ. ಇದರ ವಿಷಯವಾಗಿ ಒಂದು ಐತಿಹ್ಯವಿದೆ. ಅಮರನಾಥಕ್ಕೆ ಹೋಗಿ ಈಶ್ವರ ನನ್ನು ಯಾರು ಮೊದಲು ನೋಡಬೇಕೆಂದು ದೇವಾಸುರ ರಲ್ಲಿ ಪೈಪೋಟಿಯಾಗಿ ದೇವತೆಗಳು ಸೋಲುವುದರಲ್ಲಿ ದ್ದರು. ಆಗ ಅವರು ಶಿವನನ್ನು ಪ್ರಾರ್ಥಿಸಲು ಶಿವನು ಅಸುರರನ್ನು ಸಂಹರಿಸಿದನೆಂದೂ, ಅವರ ಶರೀರಗಳೇ ಬೃಹದಾಕಾರದ ಬಂಡೆಗಳಾದವೆಂದೂ ಆಖ್ಯಾಯಿಕೆ ಇದೆ. ಯಾತ್ರಿಕರು ಈ ಕಠಿಣ ಪರ್ವತವನ್ನೇರುವಾಗ ಶಿವನು ಅವರ ಪಾಪಗಳನ್ನು ಮನ್ನಿಸುವನೆಂಬ ನಂಬಿಕೆ ಇದೆ. ಪಿಸ್ಸೂಘಾಟಿಯ ಮೇಲುಭಾಗದಲ್ಲಿ ಜೋಜ್ ಪಾಲ್ ಎಂಬ ಒಂದು ಚದರ ಮೈಲಿ ವಿಸ್ತೀರ್ಣದ ಬಹು ರಮ್ಯ ಹುಲ್ಲುಗಾವಲಿದೆ. ಅಲ್ಲಿಂದ ಕೆಳಗೆ ಕಾಣಿಸುವ ಇಡೀ ಕಣಿವೆಯ ದೃಶ್ಯದ ಸೊಬಗು ವರ್ಣನಾತೀತವಾಗಿದೆ. ಆ ಎತ್ತರದಿಂದ ಲಿಡ್ಡಾರ್ ನದಿಯು ಬೆಳ್ಳಿಯ ಒಂದು ಎಳೆಯಂತೆ ಕಾಣುತ್ತದೆ. ದೂರದಲ್ಲಿ ಪಹಲ್ಗಾಮಿನ ನೂರಾರು ಪ್ರವಾಸಿಗಳ ಡೇರೆಗಳು ಕಾಣಿಸುತ್ತವೆ.

ಅಲ್ಲಿಂದ ಎಂಟು ಮೈಲಿ ದೂರ ಹೋದರೆ "ಶೇಷನಾಗ"ವೆಂಬ ಬಲು ಸುಂದರ ಸರೋವರವು ಸಿಗುತ್ತದೆ. ಇದು ಸಮುದ್ರಮಟ್ಟದ ಮೇಲೆ ೧೧,೭೩೦ ಅಡಿ ಎತ್ತರವಿದೆ. ಇದರ ನೀರು ಪಚ್ಚೆಯಂತೆ ನೀಲಿ ಯಾಗಿದೆ. ನೋಡಲು ಬಹು ಚೆಲುವು. ಇದೇ ಲಿಡ್ಡಾರ್ ನದಿಯ ಮೂಲಸ್ಥಾನ. ಎತ್ತರದ ಹಿಮಶಿಖರಗಳಿರುವ ಪರ್ವತಗಳು ಈ ಸರೋವರವನ್ನು ಸುತ್ತುಗಟ್ಟಿವೆ. ಮೇಲೆ ನಾಗರಹಾವು ಹೆಡೆಯನ್ನು ತೆರೆದುಕೊಂಡು ಓಲಾಡುವಂತೆ ಕಾಣಿಸುವ ಹಿಮನದಿಯ ಬಂಡೆಯು ಕೆಳ ಗಿರುವ ಸರೋವರವನ್ನು ನೋಡುತ್ತಿದೆ. ಇದರ ವಿಷಯ ವಾಗಿ ಒಂದು ಐತಿಹ್ಯವಿದೆ. ಈಶ್ವರನು ತನ್ನ ಕೈಯಿಂದ ಸಂಹಾರವಾಗದಂತೆ ಅಲ್ಲಿದ್ದ ಒಬ್ಬ ರಾಕ್ಷಸನಿಗೆ ವರವನ್ನು ಕೊಟ್ಟಿದ್ದ. ಆ ರಾಕ್ಷಸನು ಸುಂಟರಗಾಳಿಯ ರೂಪದಲ್ಲಿ ದೇವತೆಗಳನ್ನು ಹಿಂಸಿಸುತ್ತಿದ್ದ. ದೇವತೆಗಳು ಸಹಾಯಕ್ಕೆ ಶಿವನನ್ನು ಪ್ರಾರ್ಥಿಸಲು ಅವನು ಅವರಿಗೆ ವಿಷ್ಣುವಿನ ಸಹಾಯ ಕೇಳಲು ಹೇಳಿದ. ಅವರು ಆ ಸರೋವರದ ಬಳಿ ವಿಷ್ಣುವನ್ನು ಪ್ರಾರ್ಥಿಸಲು, ಅವನು ಸಾವಿರ ತಲೆಯ ಆದಿಶೇಷನ ಮೇಲೆ ಕುಳಿತು ಸರೋವರದಿಂದ ಮೇಲೆದ್ದು ಶೇಷನಾಗನ ಮೂಲಕ ಆ ರಾಕ್ಷಸನನ್ನು ಸಂಹರಿಸಿದ. ಅಂದಿನಿಂದ ಈ ಸರೋವರಕ್ಕೂ, ಅವರ ದಂಡೆಯಲ್ಲಿ ಸರ್ಪಾಕಾರದಲ್ಲಿ ನಿಂತು ನಾಗನ ಹೆಡೆಯಂತೆ ಕಾಣಿಸುವ ಆ ಪರ್ವತಕ್ಕೂ ಶೇಷನಾಗ ಎಂಬ ಹೆಸರು ಬಂದಿತು.

ಇಲ್ಲಿಂದ ಮುಂದೆ ದಾರಿ ಇನ್ನೂ ಹೆಚ್ಚು ಕಠಿಣ. ೧೪,೭೦೦ ಅಡಿಗಳೆತ್ತರದವರೆಗೂ ಬಹು ಕಷ್ಟದ ಏರನ್ನು ಹತ್ತಬೇಕು. ಅದಕ್ಕೆ "ಮಹಾಗುಣಕಣಿವೆ" ಯೆಂದು ಹೆಸರು. ಬಹು ರಮ್ಯ ದೃಶ್ಯ, ಪರ್ವತಗಳನ್ನು ಹಿಮನದಿಗಳು ಮುಚ್ಚಿವೆ. ಸುತ್ತಲೂ ಅನೇಕ ಮೈಲಿ ಗಳವರೆಗೆ ಒಂದು ಮರವೂ ಇಲ್ಲ. ಅಲ್ಲಿಂದ ಐದು ಮೈಲಿಗಳು ಪಂಚತರಿಣಿಯವರೆಗೆ ಇಳಿತದ ಮಾರ್ಗ. ಐದು ಹಿಮಶಿಖರಗಳ ನಡುವೆ ಕೊರಕಲು ಮಾಡಿ ಕೊಂಡು ಬರುತ್ತಿರುವ ಐದು ಪ್ರವಾಹಗಳಿಗೆ ಪಂಚತರಿಣಿ ಎಂದು ಹೆಸರು. ಒಮ್ಮೆ ಶಿವನು ತಾಂಡವನೃತ್ಯ ಮಾಡುತ್ತಾ ಬಹು ಸಂತೋಷದಲ್ಲಿದ್ದಾಗ ಅವನ ಜಟೆ ಯಿಂದ ಪವಿತ್ರ ಗಂಗೆಯ ಐದು ಹೊಳೆಗಳು ಭೂಮಿಗೆ ಬಿದ್ದವೆಂದು ಐತಿಹ್ಯವಿದೆ. ಅವುಗಳೆಲ್ಲಾ ಸೇರಿ ರಾಮ ಗಂಗೆಯೆಂಬ ನದಿಯಾಗಿ ಹರಿದು, ಅದು ಮುಂದೆ

ಸಿಂಧೂನದಿಯನ್ನು ಸೇರುತ್ತದೆ. ಈ ಕ್ಷೇತ್ರದಿಂದ ೧೮,೦೦೦ ಅಡಿ ಎತ್ತರದ ವಾನ್‌ಜನ್ ಕಣಿವೆಯು ಚೆನ್ನಾಗಿ ಕಾಣಿಸುತ್ತದೆ. ಅಲ್ಲಿ ಗಾಳಿಯು ಎಷ್ಟು ವೇಗವಾಗಿ ಬೀಸುತ್ತದೆಂದರೆ ಅಲ್ಲಿ ಒಂದು ಡೇರಿಯೊಳಗೆ ಕೂಡ ಬೆಂಕಿಕಡ್ಡಿಯನ್ನು ಗೀಚಿ ಬೆಂಕಿ ಮಾಡುವುದು ಬಹು ಕಷ್ಟ. ಸಾಯಂಕಾಲ ಪರ್ವತಗಳು ಸೂರ್ಯಾಸ್ತದ ಬಣ್ಣಗಳಲ್ಲಿ ಪ್ರಕಾಶಿಸುತ್ತವೆ, ಹಿಮರಾಶಿಯು ಗುಲಾಬಿ ಬಣ್ಣದಲ್ಲಿ, ಇಳುಕಲುಗಳು ಕಿತ್ತಳೆಹಣ್ಣಿನ ಬಣ್ಣದಲ್ಲಿ ಕಣಿವೆಗಳು ಕೆಂಪು-ನೀಲಿ ಬಣ್ಣದಲ್ಲಿ ಕಾಣಿಸುತ್ತವೆ. ದಣಿದ ಯಾತ್ರಿಕರು ರಾತ್ರಿ ಪಂಚತರಿಣಿಯಲ್ಲಿ ವಿಶ್ರಮಿಸಿಕೊಂಡು, ಮಾರನೆ ಬೆಳಿಗ್ಯೆ ರಕ್ಷಾಬಂಧನದ ದಿನ ಈ ನದಿಯಲ್ಲಿ ಮಿಂದು ಮುಂದೆ ಪ್ರಮಾಣಮಾಡುತ್ತಾರೆ

ಇಲ್ಲಿಂದ ಅಮರನಾಥ ಗುಹೆಗೆ ಮೂರು ಮೈಲಿಗಳು, ಬಹು ಕಡಿದಾದ ಏರು ದಾರಿ ಪರ್ವತಗಳ ಇಳಿಜಾರಿನ ಮೇಲಿದೆ. ಇದನ್ನು ಸದಾ ಮಂಜು ಮುಚ್ಚಿರುತ್ತದೆ. ಒಂದು ತಪ್ಪು ಹೆಜ್ಜೆ ಹಾಕಿದರೆ ೨೦೦೦ ಅಡಿ ಕೆಳಗೆ ಉರುಳಿಹೋಗುವ ಅಪಾಯವಿದೆ. ಅಲ್ಲಲ್ಲಿ ಜಾರುವ ಹಿಮಬಂಡೆಗಳು, ಹಿಮದ ಹಾಸುಗಲ್ಲುಗಳು, ಏರುತಗ್ಗುಗಳು, ರಕ್ತ ಹೆಪ್ಪುಗಟ್ಟುವಷ್ಟು ಚಳಿ. ವಿಶಾಲವಾದ ಗುಹೆಯೊಳಗಿನಿಂದ ಹಿಮ ಸುರಂಗದ ಮಾರ್ಗವಾಗಿ ಜಲಪ್ರವಾಹವು ಪ್ರಪಾತರೂಪದಿಂದ ಸರೋವರಕ್ಕೆ ಧುಮುಕುತ್ತದೆ. ಜಲಪಾತದಿಂದ ಹಾರಿದ ನೀರಿನಹನಿಗಳ ಮೇಲೆ ಸೂರ್ಯಕಿರಣಗಳು ಬಿದ್ದು ನಾನಾ ಬಣ್ಣಗಳ ಸಾವಿರಾರು ಕಾಮನ ಬಿಲ್ಲುಗಳು ಕಾಣಿಸುತ್ತವೆ. ಹಿಮದ ಹಾಸುಗಲ್ಲುಗಳ ಅಡಿಯಲ್ಲಿ ಹರಿಯುವ ನದಿಗಳ ಶಬ್ದ. ಹಿಮವು ಕರಗಿ ಸೊರೆಕಾರುತ್ತಾ ಭೋರ್ಗರೆದು ಹರಿಯುತ್ತಿರುವ ಪ್ರವಾಹ. ಗೋಡೆಯಂತೆ ನೇರವಾಗಿ ಎತ್ತರವಾದ ಪರ್ವತ ಶ್ರೇಣಿಗಳು. ಪರ್ವತಗಳ ತಪ್ಪಲುಗಳಲ್ಲಿ ದಪ್ಪ ಹಿಮರಾಶಿಗಳು. ೧೮,೦೦೦ ಅಡಿ ಎತ್ತರದ ಅಮರನಾಥ ಪರ್ವತದ ಶಿಖರವು ತಲೆಯೆತ್ತಿ ನಿಂತಿರುವುದು ಕಾಣುತ್ತದೆ. ಇದೊಂದು ಸೃಷ್ಟಿಯ ರಮ್ಯ. ಬಹು ರಮಣೀಯವಾದ ಈ ದೃಷ್ಟಿಪಥವು ಜಗತ್ತಿನ ಅತ್ಯಂತ ಸುಂದರ ನೈಸರ್ಗಿಕ ದೃಶ್ಯಗಳಲ್ಲೊಂದು.

ಇಲ್ಲಿಂದ ಬಲಕ್ಕೆ ತಿರುಗಿ ಒಂದು ಮೈಲಿ ದೂರ ಇಳಿದರೆ ದೂರದಲ್ಲಿ ಅಮರನಾಥ ಗುಹೆಯು ಕಾಣಿಸುತ್ತದೆ. ಅಲ್ಲಿ ಶಿವನು ಪಾರ್ವತಿಗೆ ಅಮರಕಥೆಯನ್ನು ಆರು ತಿಂಗಳಕಾಲ ಹೇಳಿದನೆಂದು ಐತಿಹ್ಯವಿದೆ. ಈಗ ಯಾತ್ರಿಕರು ಅತ್ಯಂತ ರಮಣೀಯವಾದ ವಿಶಾಲ ಮೈದಾನವನ್ನು ತಲಪುತ್ತಾರೆ. ಅದು ಅಮರನಾಥ ಬೆಟ್ಟದ ತಪ್ಪಲು ಪ್ರದೇಶ. ದೂರದಲ್ಲಿ ಸುತ್ತಲೂ ಹಿಮಾಚ್ಛಾದಿತ ಪರ್ವತ ಪಂಕ್ತಿಗಳು ಸೂರ್ಯರಶ್ಮಿಯಲ್ಲಿ ಹೊಳೆಯುತ್ತವೆ. ಹೆಚ್ಚು ಆಳವೂ, ಸೆಳೆತವೂ ಇಲ್ಲದ ಅಮರಗಂಗಾ ನದಿಯು ಶಾಂತವಾಗಿ ಹರಿಯುತ್ತದೆ. ಯಾತ್ರಿಕರು ಈ ನದಿಯಲ್ಲಿ ಮಿಂದು, ಅಮರಗಂಗೆಯ ಮೃತ್ತಿಕೆಯನ್ನು ಹಚ್ಚಿಕೊಂಡು, ಪವಿತ್ರಜಲವನ್ನು ಪಾತ್ರೆಗಳಲ್ಲಿ ತುಂಬಿಕೊಂಡು ಅಮರನಾಥ ಗುಹೆಯನ್ನು ಪ್ರವೇಶಿಸುತ್ತಾರೆ.

ಪರ್ವತದ ಮಧ್ಯಭಾಗದಲ್ಲಿ ಸಮುದ್ರಮಟ್ಟಕ್ಕಿಂತ ೧೨,೭೨೦ ಅಡಿ ಎತ್ತರದಲ್ಲಿರುವ ಅತ್ಯಂತ ವಿಸ್ಮಯಕಾರಿ ಪ್ರಾಕೃತಿಕ ಗುಹೆ ಇದ್ದು. ಎರಡು ಆನೆಗಳ ಮೇಲೆ ನಿಂತು ಕೈ ಚಾಚಿದರೂ ನಿಲುಕದಷ್ಟು ಎತ್ತರದ ಮಹಾದ್ವಾರ. ಶಿಲಾಮಯವಾದ ಈ ಗುಹೆಯು ೧೫೦ ಅಡಿ ಉದ್ದ, ೭೦ ಅಡಿ ಎತ್ತರ, ಅಷ್ಟೇ ಅಗಲ, ೮೦ ಅಡಿ ಆಳವಾಗಿದೆ. ಕೊನೆಯದಾಗಿ ಒಂದು ಏರನ್ನು ಹತ್ತಿಹೋದರೆ ಗುಹೆಯ ಮಧ್ಯದಲ್ಲಿ ಅಗಲವಾದ ಹಿಮದ ಹಲಗೆಯಮೇಲೆ ಏಳಡಿ ಎತ್ತರದ ಗಟ್ಟಿ ಮಂಜುಗಡ್ಡೆಯ ಶಿವಲಿಂಗವು ಕಾಣಿಸುತ್ತದೆ. ಎಡದಲ್ಲಿ ಅದಕ್ಕಿಂತಲೂ ಚಿಕ್ಕದಾದ ಪಾರ್ವತಿ, ಬಲದಲ್ಲಿ ಗಣಪತಿ ಲಿಂಗಗಳೂ ಸ್ವಚ್ಛವಾದ ಹಿಮದಿಂದ ನಿರ್ಮಾಣಗೊಂಡಿವೆ. ಛಾವಣಿಯಿಂದ ತೊಟಗುಟ್ಟುವ ನೀರಿನ ತೊಟ್ಟುಗಳು ಮಂಜುಗಡ್ಡೆಯ ಲಿಂಗಗಳನ್ನು ರೂಪಿಸಿವೆ. ಈ ರಚನೆಗಳು ಶುಕ್ಲಪಕ್ಷದಲ್ಲಿ ಚಂದ್ರನು ವೃದ್ಧಿಸಿದಂತೆ ವೃದ್ಧಿಸುತ್ತವೆಂದೂ, ಕೃಷ್ಣಪಕ್ಷದಲ್ಲಿ ಚಂದ್ರನು ಕ್ಷಯಿಸಿದಂತೆ ಕ್ಷಯಿಸುತ್ತವೆಂದೂ ಆಖ್ಯಾಯಿಕೆ ಇದೆ. ಈ ಲಿಂಗಗಳು ಯಾತ್ರೆಯ ದಿನದವರೆಗೂ ಬೆಳೆಯುತ್ತಾ ಹೋಗುತ್ತವೆಂದೂ, ನಂತರ ಕ್ಷಯಿಸುತ್ತಾ ಹೋಗುತ್ತವೆಂದೂ ಜನರ ನಂಬಿಕೆ. ರಕ್ಷಾ ಬಂಧನದ ಪೂರ್ಣಿಮೆಯ ದಿನ ಅವು ಪೂರ್ತಿ ಎತ್ತರಕ್ಕೆ ಬೆಳೆದಿರುತ್ತವೆ. ದ್ವಾರದ ಮೂಲಕ ಬರುವ ಸೂರ್ಯ ಕಿರಣಗಳು ಶುಭ್ರವಾದ ಹಿಮಲಿಂಗಗಳಲ್ಲಿ ಪ್ರತಿಫಲಿಸಿ ಗುಹೆಯ ಒಳಭಾಗವನ್ನು ಬೆಳಗಿಸುತ್ತವೆ. ಗಣಪತಿ ಲಿಂಗದ ಬಲಭಾಗದಲ್ಲಿ ಅಮ-

ರಾವತೀ ತೀರ್ಥ ಕುಂಡವೂ. ಅದರ ಪಕ್ಕದಲ್ಲಿ ಭಸ್ಮದಂಥ ಬಿಳಿ ಮಣ್ಣಿನ ರಾಶಿಯೂ ಇವೆ. ಇವೇ ಅಲ್ಲಿನ ತೀರ್ಥ ಪ್ರಸಾದಗಳು. ಪಾರ್ವತೀ ಲಿಂಗದ ಎಡಗಡೆ ಒಂದು ಶಿಲಾಫಲಕದ ಮೇಲೆ "ಛಡಿ"ಯನ್ನು ಸ್ಥಾಪಿಸಲಾಗಿದೆ. ಯಾತ್ರಿಕರು ಮೊದಲು ಗಣಪತಿ ಲಿಂಗವನ್ನೂ ನಂತರ ಶಿವ-ಪಾರ್ವತಿಯರ ಲಿಂಗಗಳನ್ನೂ, "ಛಡಿ" ಯನ್ನೂ ಪೂಜಿಸಿ, ಹಣ್ಣು ಕಾಯಿಗಳನ್ನು ಸಮರ್ಪಿಸಿ, ತೀರ್ಥಪ್ರಸಾದಗಳನ್ನು ತೆಗೆದುಕೊಂಡು ಹಿಂದಿರುಗುತ್ತಾರೆ. ಯಾತ್ರಿಕರು 'ಕ್ಯೂ' ಕ್ರಮದಿಂದ ಸಾಲಾಗಿ ಒಂದು ಭಾಗದಿಂದ ಗುಹೆಯನ್ನು ಪ್ರವೇಶಿಸಿ ಇನ್ನೊಂದು ಕಡೆಯಿಂದ ಹೊರಗೆ ಬರುತ್ತಾರೆ. ಈ ದೇವಾಲಯವು ಅಲ್ಲಿನ ದೇವರಂತೆ ಪ್ರಾಕೃತಿಕ. ಮಾನವ ನಿರ್ಮಿತವಲ್ಲ. ಮಳೆ, ಗಾಳಿ, ಬಿಸಿಲುಗಳು ಈ ಪವಾಡವನ್ನೆಸಗಿವೆ ಇಲ್ಲಿ ಪ್ರಕೃತಿಯೇ ದೇವ, ದೇಗುಲ. ಯಾತ್ರಾರ್ಥಿಗಳೇ ಪೂಜಾರಿಗಳು. ಇದೊಂದು ವಿಶೇಷ ಗುಣ.

ರಕ್ಷಾಬಂಧನದ ಪೌರ್ಣಮಿಯ ದಿನ ಅಮರನಾಥನ ದರ್ಶನವು ಶುಭಕರವೆಂದು ಗಣಿಸಲ್ಪಟ್ಟಿದೆ. ಆ ದಿನ ಗುಹೆಯಿಂದ ಒಂದು ಜೋಡಿ ಪಾರಿವಾಳಗಳು ಹೊರಹೊರಟು ಪರ್ವತದ ಸುತ್ತಲೂ ಹಾರುವುದನ್ನು ನೋಡಬಹುದು. ಇದೊಂದು ಆಶ್ಚರ್ಯಕಾರಿ ದೃಶ್ಯ. ಅವು ಹಿಂದೆ ಶಿವಭಕ್ತ ಮುನಿಗಳಾಗಿದ್ದವೆಂದೂ, ಶಿವನ ತಪಸ್ಸಿಗೆ ಅಡ್ಡಿಮಾಡಿದ್ದರಿಂದ ಅವು ಶಾಪಗ್ರಸ್ಥ ಪಾರಿವಾಳಗಳಾದವೆಂದೂ, ಅವು ಶತಮಾನಗಳಿಂದ ಅಲ್ಲಿಯೇ ಶಿವನೊಡನೆ ನೆಲಸಿವೆಯೆಂದೂ ಆಖ್ಯಾಯಿಕೆಯಿದೆ. ಈ ಪಾರಿವಾಳಗಳು ವರ್ಷವೆಲ್ಲಾ ಗುಹೆಯೊಳಗೇ ವಾಸಿಸುತ್ತವೆಯೆಂದು ಹೇಳುತ್ತಾರೆ. ಚಳಿಗಾಲದಲ್ಲಿ ಒಂದು ಗರಿಕೆ ಹುಲ್ಲೂ ಕೂಡ ಅಲ್ಲಿ ಬೆಳೆಯದಿರುವಾಗ, ಅವಕ್ಕೆ ಆಹಾರವೆಲ್ಲಿ ಎಂಬುದು ಸಮಸ್ಯೆಯಾಗಿದೆ. ನೂರಾರು ವರ್ಷಗಳಿಂದಲೂ ಯಾತ್ರಿಕರು ಈ ಪಕ್ಷಿಗಳನ್ನು ನೋಡಿದ್ದಾರೆ. ಅವು ಒಂದೇ ಪಕ್ಷಿಗಳೇ ಅಥವ ಇತರ ಪಾರಿವಾಳಗಳು ತಾವು ಸಾಯುವಾಗ ಅವನ್ನು ರಹಸ್ಯ ರೀತಿಯಲ್ಲಿ ಬದಲಿಯಲ್ಲಿಡುತ್ತವೆಯೋ ಎಂಬುದು ಯಾರಿಗೂ ಗೊತ್ತಾಗಿಲ್ಲ.

---

## ಆಳರಸು ಕರಿಯಪ್ಪ ( ಜಾನಪದ - ಡೊಳ್ಳಿನಪದ )

—ಕೆ. ವಿರೂಪಾಕ್ಷಗೌಡ

ಅರಸನಿದ್ದರೆ ಇರ್ಬೇಕು ನಮ್ಮ ಕರಿಯಪ್ಪನಂತಾ ಅರಸೇಳೋ
ಆಳುವ ಇದ್ದಿರೆ ಇರ್ಬೇಕು ನಮ್ಮ ಮಾಳಪ್ಪನಂತಾ ಆಳೇಳೋ ॥ಪ॥
ಆಳು ಅರಸ ತಾಳವ್ಯಾಳೋ ನಾಲ್ಕು ಕೂಡಿದ್ರೊಂದರಮನಿಯೋ
ನಾಲ್ಕು ಕೂಡಿದ್ರೊಂದರಮನಿಯೊಳಗ ನಲ್ಲಭೋಗ ಶಿವನೈದಾನ
ನಲ್ಲಭೋಗ ಶಿವನೈದಾನೆಂದು ನಾರೇರು ತಂದಾರ ಕಳಸಾವ
ಕಳಸಗಿತ್ತಿಗೆ ತಡೆಇಲ್ಲಪ್ಪ ನಿನ್ನ ಕಟ್ಟಿದ ಪೂಜಿಗೆ ಬೆಲೆಯಿಲ್ಲ
ಬಳಿಗಳಕೈಯ ಬಾಲೇರು ಬಂದು ಬೆಲ್ಲದಾರುತಿ ಬೆಳಗ್ಯಾರ
ಕೆಂಚ ಕೆಂಚಿಯರು ಕೂಡ್ಯಾರೆಲ್ಲ ಕಂಚಿನಾರುತಿ ಬೆಳಗ್ಯಾರ
ಮುತ್ತೈದಿ ಗೌರವ್ವ ಬಂದಾಳ ಮುತ್ತಿನಾರುತಿ ಬೆಳಗ್ಯಾಳ
ಮುತ್ತಿನಾರುತಿ ಬೆಳಗ್ಯಾಳಲ್ಲೋ ಮುಕ್ಕಣ್ಣಗ ಶಿವರಾಯನಿಗೆ
ಮುಕ್ಕಣ್ಣಗ ಶಿವಗಾರುತಿ ಎತ್ತಿ ಮೂರಾರೆಂದೆಣಿಸ್ಯಾಳ
ಎತ್ತಿ ಆರತಿ ಬೆಳಗ್ಯಾಳೆಲ್ಲ ಮುತ್ತೈದೆ ಮಾತಾಯಿ ಗೌರವ್ವ ॥
ಅರಸನಿದ್ದರೆ.......... .......... ಆಳೇಳೋ ॥–॥

( 28 ನೇ ಪುಟ ದಿಂದ )
ಪರಿಸ್ಥಿತಿಯ ಸುಗಮತೆಗಾಗಿ ಹಂಬಲಿಸುವ ನೂತನ ಸಮಾಜದ ನಿರ್ಮಾಣಕ್ಕೆ ಮನಃಪೂರ್ವಕವಾಗಿ ದುಡಿಯುವ ಪ್ರತಿಜ್ಞೆ ಕೈಗೊಳ್ಳಬೇಕು. "ಮನಸ್ಸು ಮಾಡು, ಕರ್ತವ್ಯನಿಷ್ಠನಾಗು, ಕಾದು ನೋಡು" ಎಂಬ ಲೂಯಿಪ್ಯಾಶ್ಚರನ ಸೂತ್ರಗಳಂತೆ ಎಲ್ಲಕ್ಕೂ ಮೊದಲು ಮನಸ್ಸುಮಾಡಬೇಕು. ತ್ರಿಕರಣಗಳಲ್ಲಿ ಮನಸ್ಸು ಮೊದಲನೆಯದು ಅದನ್ನು ಮಾತು ಮತ್ತು ದೇಹಗಳು, ಅನುಸರಿಸುತ್ತವೆ. ಆದುದರಿಂದ ನಿರ್ಮಲ ಮನಸ್ಸಿನ ಪ್ರಜೆಗಳ ನಿರ್ಮಾಣವಾಗಿ ಉತ್ತಮ ಸಮಾಜವು ರೂಪುಗೊಳ್ಳಲು ಮನಸ್ಸಿನ ನಿಯಂತ್ರಣದ ಕಡೆಗೆ ಸೂಕ್ತ ಗಮನ ಅಗತ್ಯ, ಆಗ ಮಾತ್ರ "ಮನಏವ ಮನುಷ್ಯಾಣಾಂ...." ಎಂಬ ವಚನಾಮೃತದ ಅರ್ಥವನ್ನು ತಿಳಿದಂತಾಗಿ ಜೀವಿನದಲ್ಲಿ ಸ್ಪಷ್ಟತೆ ಹಾಗೂ ಭದ್ರತೆ ದೊರೆಯಲು ಸಾಧ್ಯವಿದೆ. ಆಗ ಮಾತ್ರ ಮನುಷ್ಯತ್ವದ ಮಹತಿ ಮುಗಿಲು ಮುಟ್ಟುತ್ತದೆ.

# ಮನಸ್ಸಿನ ಸ್ವರೂಪ

—ಬಿ. ಎಲ್. ಭಟ್

" ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ "

'ಈ ಅಪಾರವಾದ ಸಂಸಾರ ಸಾಗರದಲ್ಲಿನ ಬಂಧನ ಮತ್ತು ಮೋಕ್ಷಗಳಿಗೆ ಮನಸ್ಸೇ ಕಾರಣ' ಎಂದು ಆಚಾರ್ಯಪುರುಷರ ಸೂಕ್ತಿ. ಇಂದಿನ ವೈಜ್ಞಾನಿಕ ಯುಗದಲ್ಲಿ ಇಂತಹ ಅನೇಕ ನುಡಿಗಳನ್ನು ಗಮನಿಸುವ ಕಾಲವ್ಯವಧಾನ ಬಹುಮಂದಿಗೆ ಇಲ್ಲದೆ ಹೋದರೂ ಮಂತ್ರದ್ರಷ್ಟಾರರೆನಿಸಿದ ಪ್ರಾಚೀನ ಋಷಿಗಳ ಹೇಳಿಕೆಗಳನ್ನು ನಾವಿಂದು ವಿವೇಚಿಸಬೇಕಾದುದು ಅನಿವಾರ್ಯವಾಗಿದೆ. ಏನನ್ನೋ ಆಡುತ್ತಾ ಇನ್ನೇನನ್ನೋ ಮಾಡುತ್ತಿರುವ ಮಂದಿಯೇ ಹೆಚ್ಚುತ್ತಲಿರುವ ವರ್ತಮಾನ ಪ್ರಪಂಚದಲ್ಲಿ ವಿವೇಕಯುಕ್ತವಾದ ಆರ್ಯೋಕ್ತಿಗಳನ್ನು ಅರ್ಥವಿಸಿಕೊಳ್ಳಬೇಕಾದ ಅಗತ್ಯ ಬಂದಿದೆ.

ಕವಿವರ ಕುವೆಂಪುರವರು ಒಂದೆಡೆ "ಮನುಷ್ಯನ ಮನಸ್ಸು ಊರ್ಧ್ವಮುಖಿ" ಎಂದಿದ್ದಾರೆ. ಸಾಕ್ಷೀಭೂತವಾದ ಜಗತ್ತಿನಲ್ಲಿ ಇಂದು ಎಲ್ಲಕ್ಕೂ ವೈಜ್ಞಾನಿಕ ಆಧಾರವನ್ನೇ ಹುಡುಕುತ್ತಿರುವ 'ವಿಶೇಷ ಜ್ಞಾನಿ' ಗಳು ಕೆಲವೊಮ್ಮೆ ವಿಚಿತ್ರವಾದ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಿರುವಾಗ ಮನಸ್ಸಿನ ಬಗೆಗೂ ಯೋಚಿಸಿದರೆ ತಪ್ಪೇನಿಲ್ಲ. ಮನುಷ್ಯನ ಜೀವನ ಸರ್ವಸ್ವದ ಮೇಲೆ ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ತನ್ನ ಸ್ವಾಮಿತ್ವವನ್ನು ಪಡೆದಿರುವ ಮನಸ್ಸಿನ ವಿಶ್ವರೂಪದರ್ಶನವಾಗಲೇಬೇಕು. ಅದರ ಇತಿಮಿತಿಗಳೇನು ? ಆಳ ಎತ್ತರಗಳೆಷ್ಟು ? ಎಂಬುದನ್ನು ಮನಗಾಣಬೇಕು. ಆಗ ಮಾತ್ರ ಜೀವನದ ಧ್ಯೇಯ ಧೋರಣೆಗಳನ್ನು ನಿರೂಪಿಸುವುದರಲ್ಲಿ ಮನಸ್ಸಿನ ಸ್ಥಾನ ಪರಮೋಚ್ಚವಾದುದು ಎಂಬುದು ಸಿದ್ಧವಾಗುತ್ತದೆ. ಮಹಾತ್ಮರ ಜ್ಞಾನ, ವಿಜ್ಞಾನಿಗಳ ಆವಿಷ್ಕಾರ, ಕವಿಗಳ ಕಲ್ಪನಾಲಹರಿ, ರಾಜಕಾರಣಿಗಳ ತಂತ್ರ, ಭಾವುಕರ ಆದರ್ಶ– ಇವುಗಳಿಗೆ ಮನಸ್ಸೇ ಮೂಲ !

ಮನಸ್ಸಿನ ಬಗ್ಗೆ ಪ್ರಾಚೀನ ಅರ್ವಾಚೀನರ ಹೇಳಿಕೆಗಳು ಅಸಂಖ್ಯ. ಒಂದೊಂದೂ ಅದರ ವೃತ್ತಾಂತದ ವಿಶದವಾದ ವಿವರಣೆಯನ್ನು ಪರಿಚಯ ಮಾಡಿಕೊಡುತ್ತವೆ. ದಾಸಶ್ರೇಷ್ಠರು ತಮ್ಮ ಒಂದು ಕೀರ್ತನೆಯಲ್ಲಿ " ಮನವೆಂಬ ಮರ್ಕಟವಿನ ಮಾತು ಕೇಳದೊ " ಎಂದು ಹಲುಬಿದ್ದಾರೆ. ಭಕ್ತಿಭಂಡಾರಿ ಬಸವಣ್ಣನವರು " ಓತಿ ಬೇಲಿವರಿದಂತೆ ಎನ್ನ ಮನವಯ್ಯ, ಹೊತ್ತಿಗೊಂದು ಪರಿಯಪ್ಪ ಗೋಸುಂಬೆಯಂತೆನ್ನ ಮನವು, ಬಾವುಲ ಬಾಳುವೆಯಂತೆನ್ನ ಮನವು" ಎಂದು ಹೇಳಿದ್ದಾರೆ. ಗೀತಾಚಾರ್ಯನಾದ ಶ್ರೀ ಕೃಷ್ಣನು ಅರ್ಜುನನ ಮೋಹವನ್ನು ಹೋಗಲಾಡಿಸಲು ಮನಸ್ಸನ್ನು ಕುರಿತು ಹೀಗೆಂದಿದ್ದಾನೆ— ಆತ್ಮನೇ ರಥಿಕ, ದೇಹವೇ ರಥ, ಬುದ್ಧಿಯೇ ಸಾರಥಿಯು, ಮನಸ್ಸು ಹಗ್ಗ, ಪಂಚೇಂದ್ರಿಯಗಳೇ ಕುದುರೆಗಳು. "ರಥವು ಸರಿಯಾಗಿ ಪಥಕ್ರಮಣ ಮಾಡಲು ಉತ್ತಮವಾದ ಕುದುರೆಗಳು ಬೇಕು, ಅವುಗಳನ್ನು ರಥಕ್ಕೆ ಕಟ್ಟಲು ಹಗ್ಗ ಬೇಕು. ಹಗ್ಗವನ್ನು ಸರಿಯಾಗಿ ಹಿಡಿದು ಕುದುರೆಗಳನ್ನು ಸರಿದಾರಿಯಲ್ಲಿ ನಡೆಸಬಲ್ಲ ಕುಶಲಸಾರಥಿಯು ಅವಶ್ಯವಾಗಿ ಬೇಕು. ಆಗ ಮಾತ್ರ ಯಾವುದೇ ಅಪಘಾತಕ್ಕೆ ಅವಕಾಶವಿಲ್ಲದೆ ರಥವನ್ನು ಗಮ್ಯಸ್ಥಾನಕ್ಕೆ ಒಯ್ಯಬಹುದು. ಇಲ್ಲಿ ಮನಸ್ಸೆಂಬ ಹಗ್ಗವನ್ನು ಬುದ್ಧಿಯೆಂಬ ಸಾರಥಿಯ ಕೈಗೆ ಕೊಡಲಾಗಿದೆ. ಈ ರೂಪಕವಂತೂ ಮನಸ್ಸು-ಬುದ್ಧಿಗಳ ನಿಜರೂಪವನ್ನು ಎತ್ತಿ ತೋರಿಸುತ್ತದೆ. ಮನಸ್ಸು ಯಾವಾಗಲೂ ಚಂಚಲ ಅದನ್ನು ಸರಿಯಾಗಿ ನಿಯಂತ್ರಿಸುತ್ತಿರಬೇಕು. ಅದನ್ನು ಅಂಕೆಯಲ್ಲಿಡಲು ಬುದ್ಧಿಯು ಶ್ರೇಷ್ಠಸಂಸ್ಕಾರವನ್ನು ಹೊಂದಿರಬೇಕು. ಬುದ್ಧಿಯ ಹಿಡಿತ ಸ್ವಲ್ಪ ಸಡಿಲವಾದರೂ ಮನಸ್ಸು ಅಧೋಗತಿಯೆಡೆಗೆ ಹೊರಳಬಹುದು. ಕೆಸರಾದ ನಂತರ ತೊಳೆಯುವುದಕ್ಕಿಂತ ಕೆಸರಾಗದಂತೆ ಎಚ್ಚರಿಕೆ ವಹಿಸುವುದು ಮೇಲಲ್ಲವೆ !

ಆಧುನಿಕ ಮನಶಾಸ್ತ್ರಜ್ಞರು ಮನಸ್ಸಿನ ಬಗೆ-ಬಗೆಯಾದ ರೂಪಗಳನ್ನು ಶಾಸ್ತ್ರೀಯವಾಗಿ ಚರ್ಚಿಸಿ

ದ್ದಾರೆ. ಮನಸ್ಸಿನ ಸ್ವರೂಪ, ಅದರ ಮೇಲಾಗಬಹುದಾದ ಪ್ರಭಾವ, ಅದರ ವ್ಯಾಪ್ತಿ, ನಿಯಂತ್ರಣ, ಪ್ರತಿಕ್ರಿಯೆ—ಈ ಎಲ್ಲ ವಿಷಯಗಳ ಮೇಲೂ ಅವರು ಕ್ಷ-ಕಿರಣ ಬೀರಿದ್ದಾರೆ. ವ್ಯಕ್ತಿಯ ಜನನದಿಂದ ಮರಣದವರೆಗೆ ಮನಸ್ಸು ಅಸ್ತಿತ್ವದಲ್ಲಿರುತ್ತದೆ. ವಯೋಮಾನಕ್ಕನುಗುಣವಾಗಿ ಮನಸ್ಸಿನಲ್ಲೂ ಏರುಪೇರುಗಳಿರುತ್ತವೆ. ದೈಹಿಕ ಮನಸ್ಸು-ಮಾನಸಿಕ ವಯಸ್ಸು ಬೇರೆ ಬೇರೆಯೆಂಬುದನ್ನು ಎಲ್ಲರೂ ಒಪ್ಪಿದ್ದಾರೆ. ಬಾಲ್ಯದಲ್ಲಿಯೇ ಪ್ರೌಢರ ಅನುಭವ ಹೊಂದಿರುವುದೂ, ಪ್ರೌಢರಲ್ಲಿ ಬಾಲಭಾವ ಕಂಡುಬರುವುದೂ ಸಾಧ್ಯವಿದೆ. ಈ ವ್ಯತ್ಯಾಸಕ್ಕೆ ಮಗುವು ಗರ್ಭದಲ್ಲಿದ್ದಾಗ ಅದರ ಮೇಲಾಗುವ ಪ್ರಭಾವ ಹುಟ್ಟಿದ ಮೇಲೆ ಅದು ಬೆಳೆದು ಬಂದ ಪರಿಸರವೇ ಕಾರಣವಾಗಿರುತ್ತದೆ. ಪುರಾಣ-ಇತಿಹಾಸಗಳಲ್ಲಿ ಅಲ್ಲದೆ ಇಂದಿನ ಸಮಾಜದಲ್ಲೂ ಇವಕ್ಕೆ ಸಾಕಷ್ಟು ಉದಾಹರಣೆಗಳು ಸಿಗುತ್ತವೆ.

ಮನುಷ್ಯನ ಮನಸ್ಸನ್ನು ಸ್ಥೂಲ ಮತ್ತು ಸೂಕ್ಷ್ಮ ಎಂದು ಎರಡು ಬಗೆಯಾಗಿ ವಿಂಗಡಿಸಬಹುದು. ಬೇಗನೇ ವಿಷಯಗ್ರಹಣ ಸಾಮರ್ಥ್ಯವಿಲ್ಲದಿರುವುದು ಸ್ಥೂಲಮನಸ್ಸಿನ ಲಕ್ಷಣ. ಬೆರಳು ತೋರಿದರೆ ಹಸ್ತ ನುಂಗುತ್ತಾನೆ ಎಂಬಂತೆ ಸ್ವಲ್ಪ ಹೇಳುವಷ್ಟರಲ್ಲಿ ಪೂರ್ಣವಾಗಿ ತಿಳಿದುಕೊಳ್ಳುವುದು ಸೂಕ್ಷ್ಮಮನಸ್ಸಿನ ಲಕ್ಷಣ. ಸೂಕ್ಷ್ಮಮನಸ್ಸಿನ ವ್ಯಕ್ತಿಗಳು ಸದಾ ಚಿಂತನಶೀಲರು ಯೋಚನೆಗಳ ಸುಳಿಯಲ್ಲಿ ಸಿಕ್ಕಿರುತ್ತಾರೆ. ಸಮಾಜದ ಆಗುಹೋಗುಗಳ ಕಡೆಗೆ ಗಮನವೀಯುತ್ತಾರೆ. ಬೇರೆಯವರ ಸುಖದುಃಖಗಳಿಗೆ ಪ್ರತಿಕ್ರಿಯೆ ವ್ಯಕ್ತಪಡಿಸುತ್ತಾರೆ. ಬದಲಾಯಿಸುತ್ತಿರುವ ಸಮಾಜದ ಗುಣದೋಷಗಳನ್ನು ಅಳೆಯುತ್ತಾರೆ. ಸುಖಶಾಂತಿಗಳಿಗೆ ಹಿಗ್ಗುತ್ತಾರೆ. ದುಃಖ-ಕ್ಷೋಭೆಗಳಿಗೆ ಮರುಗುತ್ತಾರೆ. ರಾಷ್ಟ್ರದ ಉನ್ನತಿಯನ್ನು ಕುರಿತು ಸದಾ ಕಳವಳದಿಂದಿರುತ್ತಾರೆ. ಒಟ್ಟಿನಲ್ಲಿ ಅವರನ್ನು ಸಂವೇದನಾಶೀಲರೆಂದು ತಿಳಿಯಬಹುದು. ಇದಕ್ಕೆ ತೀರಾ ವಿಭಿನ್ನ ಮನೋಭಾವವುಳ್ಳವರು ಸ್ಥೂಲಮನಸ್ಸಿನ ಮಂದಿ, ಅವರು ತಮ್ಮ ಮೂಗಿನ ನೇರಕ್ಕೇ ಯೋಚಿಸುತ್ತಾರೆ. ಇತರರ ಅನಿಸಿಕೆಗಳನ್ನು ಗಣನೆಗೇ ತೆಗೆದುಕೊಳ್ಳಲಾರರು. ಅಂತಹವರು ಯಾವುದನ್ನೂ ಮನಸ್ಸಿಗೆ ತೆಗೆದುಕೊಳ್ಳುವುದಿಲ್ಲ.

ಮನುಷ್ಯಜೀವನದ ಗುರಿಗಳು ಎರಡು—ನೆಮ್ಮದಿ ಮತ್ತು ತೃಪ್ತಿ. ಇವುಗಳ ಸಾಧನೆಗೆ ಮನಸ್ಸು ಸರಿಯಾಗಿರಬೇಕು. ಇಂದು ಎಲ್ಲೆಲ್ಲೂ ಪ್ರಜಾಪ್ರಭುತ್ವ ಹಾಗೂ ಮಾನವೀಯತೆಯ ಬಗೆಗೆ ಘೋಷಣೆಗಳು ಕೇಳಿಬರುತ್ತವೆ. ಆದರೆ ಅದನ್ನು ಹೇಳುವವರು ಅದರ ಆಚರಣೆಗೆ ಅವಕಾಶ ಕೊಡುತ್ತಿದ್ದಾರೆಯೇ ಎಂಬುದು ಪ್ರಶ್ನೆಯಾಗಿದೆ. ವಿದ್ಯಾವಂತರು ಅವಿದ್ಯಾವಂತರನ್ನು ಅರಿತವರು ಅರಿವಿಲ್ಲದವರನ್ನು, ಶ್ರೀಮಂತರು ಬಡವರನ್ನು ತಮಗೆ ಬೇಕಾದ ಹಾಗೆ ಆಡಿಸುತ್ತಾರೆ. ಅಲ್ಲದೆ, ಜೀವನ ಮೌಲ್ಯಗಳ ಕಡೆಗೆ ಗಮನಿಸುತ್ತಿಲ್ಲ, ಮಾತಿಗೂ ಆಚರಣೆಗೆ ಅರ್ಥಾರ್ಥ ಸಂಬಂಧವಿಲ್ಲ. ಇಂತಹ ವ್ಯಕ್ತಿಗಳಿಗೆ "ಆಡದೆ ಮಾಡುವವನು ಉತ್ತಮನು, ಆಡಿ ಮಾಡುವವನು ಮಧ್ಯಮನು, ಆಡಿಯೂ ಮಾಡದವನು ಅಧಮನು" ಎಂಬ ಸರ್ವಜ್ಞನ ಮಾತನ್ನು ಜ್ಞಾಪಿಸಬೇಕು.

ನಮ್ಮ ಸಮಾಜದಲ್ಲಿ ಸಮಸ್ಯೆಗಳು ಹಲವು. ಅವುಗಳನ್ನು ಬಿಡಿಸುವ ದಾರಿಯೇ ಸಿಗುತಿಲ್ಲ. ಎಲ್ಲಾ ವರ್ಗದ ಜನರಲ್ಲೂ ಸ್ವಾರ್ಥ, ದುರಾಸೆಗಳು ತೀವ್ರವಾಗಿವೆ. ಒಂದು ಕಾಲದಲ್ಲಿ ಭಾರತದ ಸಂಸ್ಕೃತಿ ಜಗತ್ತಿನಲ್ಲಿಯೇ ಅಪೂರ್ವವಾಗಿತ್ತು. ಈಗಲೂ ಪಾಶ್ಚಾತ್ಯ ರಾಷ್ಟ್ರಗಳ ಪ್ರಜೆಗಳು ಭಾರತದ ಸನಾತನ ಸಂಸ್ಕೃತಿಯ ಆಶ್ರಯ ಛಾಯೆಯಲ್ಲಿ ಅನಂತ ಶಾಂತಿಯನ್ನು ಹೊಂದಲು ಮುಂದಾಗುತ್ತಿದ್ದಾರೆ. ನಾವು ಮಾತ್ರ 'ದೀಪದಡಿ ಕತ್ತಲೆ' ಎಂಬಂತೆ ಆಗಿದ್ದೇವೆ. ಇದನ್ನೆಲ್ಲ ಅರಿತು ನಾವು ಕಣ್ಮುಚ್ಚಿ ಕುಳಿತಿರಲು ಇದು ಕಾಲವಲ್ಲ. ನಮ್ಮ ಮನಸ್ಸಿಗಂಟಿರುವ ಕೊಳೆಗಳನ್ನೆಲ್ಲ ತೊಳೆದು ಹಾಕಲು, ನೀತಿಯುತವಾದ ಬಾಳ್ವೆಗೆ ಪಣತೊಡಲು ಇದು ತಕ್ಕ ಕಾಲ. ಆದದ್ದನ್ನೆಲ್ಲ ಮರೆತು ಭವಿಷ್ಯದ ಬಾಳು ಹಸನಾಗಿ ಭಾರತದ ಭವಿತವ್ಯವು ಉಜ್ವಲವಾಗುವಂತೆ ಯತ್ನಿಸಬೇಕಾದುದು ಪ್ರತಿಯೊಬ್ಬ ಭಾರತೀಯನ ಪ್ರಥಮ ಕರ್ತವ್ಯವಾಗಿದೆ ಅದಕ್ಕಾಗಿ ನಾವೆಲ್ಲರೂ 'ಉತ್ತಿಷ್ಠತ! ಜಾಗ್ರತ! ಪ್ರಾಪ್ಯವರಾನ್ನಿಬೋಧತ!' ಎಂಬ ಉಪನಿಷದ್ವಾಣಿಯ ಆದರ್ಶವನ್ನು ಯಥಾರ್ಥವಾಗಿ ಬಾಳಿನ ಗುರಿಯನ್ನಾಗಿ ಆರಿಸಿಕೊಳ್ಳುವುದು ಅವಶ್ಯಕವಾಗಿದೆ. ಇಂತಹ ಆದರ್ಶಗಳನ್ನು ಕೈಗೊಳ್ಳಲು ಮನಸ್ಸು ಪಕ್ವವಾಗಿರಬೇಕು; ಸ್ಥಿರವಾಗಿರಬೇಕು. ತನ್ನ ಪರಿಸರದ

( 26 ನೇ ಪುಟ ನೋಡಿ )

LICENCED TO POST WITHOUT PRE PAYMENT LICENCE
Registred with the Registrar of News papers for India under No.
Siddaganga Monthly Magazine Siddaganga. Reg No. K

# ಕಸ್ತೂರಿ

## ಬಾರ್ ಸೋಪ್
## ನೀಲಂ ಸೋಪ್



**ಸ್ವಚ್ಛತೆ ಮತ್ತು ಪ್ರಕಾಶಮಾನವಾದ ಬಟ್ಟೆಗಳಿಗೆ**







ತಯಾರಕರು:
ಶ್ರೀ ರಾಮಕೃಷ್ಣ ಆಯಿಲ್ ಮಿಲ್ಸ್, ಮಂಗಳೂರು-575 003